# ನರಕದ ನ್ಯಾಯ

## ಮೊದಲಾದ ಮೂರು ಏಕಾಂಕ ನಾಟಕಗಳು



ಜಿ. ಪಿ. ರಾಜರತ್ನಂ



'ವಿದೇಹ'
೧೪, ೧೭ನೇ ಕ್ರಾಸ್ ರೋಡ್
ಮಲ್ಲೇಶ್ವರಂ, ಬೆಂಗಳೂರು-೩.

# ನರಕದ ನ್ಯಾಯ

ಮೊದಲಾದ ಮೂರು ಏಕಾಂಕ ನಾಟಕಗಳು

ಜಿ. ಪಿ. ರಾಜರತ್ನಂ



'ವಿದೇಹ'
14, 17 ನೇ ಕ್ರಾಸ್ ರೋಡ್,
ಮಲ್ಲೇಶ್ವರಂ : : ಬೆಂಗಳೂರು-3.

ಮೊದಲನೆಯ ಮುದ್ರಣ ೧೯೩೪

ಎರಡನೆಯ ಮುದ್ರಣ ೧೯೪೩

ಮೂರನೆಯ ಮುದ್ರಣ ೧೯೫೦

ನಾಲ್ಕನೆಯ ಮುದ್ರಣ ೧೯೬೮







ಬೆಲೆ : ರೂ ೧.೫೦

ಮುದ್ರಕರು :
ರಾಜಾ ಪವರ್ ಪ್ರೆಸ್
14ನೇ ಕ್ರಾಸ್ ರೋಡ್, ಮಲ್ಲೇಶ್ವರಂ, ಬೆಂಗಳೂರು–3.

## ಮೊದಲನೇ ಮುದ್ರಣದ ಮುನ್ನುಡಿ

ಈ ಪುಸ್ತಕದಲ್ಲಿ ಇರುವುದು ‘ಬೇವಾರ್ಸಿ’ಯ ಬರೆಹ. ‘ಬೇವಾರ್ಸಿ’ಯು ಅನಕ್ಷರಸ್ತನಾದ ‘ಯೆಂಡಕುಡಕ ರತ್ನ’ನ ಲಿಪಿಕಾರ, ಅವನ ಸ್ನೇಹಿತ, ಅವನ ಹಿಂದೆ ನೆರಳಿನಂತೆ ಇರುವವನು. ‘ಬೇವಾರ್ಸಿ’ಯ ಸರಿಯಾದ ಹೆಸರು ಕೂಡ ರತ್ನ—ಬೇವಾರ್ಸಿ ರತ್ನ.

ಬೇವಾರ್ಸಿಯ ಈ ಕೃತಿಯ ವಿಚಾರವಾಗಿ ಎರಡು ಮಾತು : ಸಾಮಾನ್ಯವಾಗಿ ಜ್ಞಾನವನ್ನು ಜ್ಯೋತಿಗೆ ಹೋಲಿಸುವರು. ಜ್ಯೋತಿಯು ಕಣ್ಣೆದುರಿಗೆ ಇದ್ದಾಗ, ನೆರಳು ವಸ್ತುವಿನ ಬೆನ್ನ ಹಿಂದೆ ನಿಲ್ಲದೆ ಮುಂದೆ ಬರುವುದು ಸ್ವಭಾವ ವಿರುದ್ಧವೆಂದು ಬೇವಾರ್ಸಿಯು ಬಲ್ಲನು. ಆದರೆ ಸದಾ ಮೂರು ಹೊತ್ತೂ ಹೆಂಡದ ಜೊತೆಯಲ್ಲಿಯೇ ಇರುವ ಪದಾರ್ಥಕ್ಕೆ ಹೆಂಡದ ರುಚಿ ಬರದೆ ಇದ್ದರೂ ಹೆಂಡದ ವಾಸನೆಯಾದರೂ ಅಂಟದಿದ್ದರೆ, ಅದು ಆ ಹೆಂಡಕ್ಕೆ ಮಾನ ತರುವ ಮಾತಲ್ಲವೆಂದೂ ಬೇವಾರ್ಸಿಗೆ ಗೊತ್ತು. ಮತ್ತೆ ಗಂಧವು ಎಂತಹುದೇ ಆದರೂ ಬಹುಕಾಲ ಗುಪ್ತವಾಗಿರಲು ಸಾಧ್ಯವಿಲ್ಲ. ಅದು ಕಾರಣವಾಗಿ ಈ ಪುಸ್ತಕವು ಹೊರಬಿದ್ದಿತು.

ಇನ್ನು ಈ ಪುಸ್ತಕದ ವಿಚಾರವಾಗಿ ಹೇಳಬೇಕಾದುದನ್ನೆಲ್ಲ ಬೇವಾರ್ಸಿಯೇ ತನ್ನ ತಲೆಹರಟೆಯಲ್ಲಿ ಹೇಳಿದ್ದಾನೆ. ಒಳಗಿರುವ ಎರಡು ದೃಶ್ಯಗಳಲ್ಲಿ ಮೊದಲನೆಯದು, ತನ್ನ ನಾರಿಗೆ ಹೂವಿನಂತಿರುವ ಹೆಂಡಕುಡಕನನ್ನು ನಾಯಕನನ್ನಾಗಿ ಮಾಡಿ ಬರೆದುದು. (ಅದರಲ್ಲಿ ಬರುವ ಎರಡು ಗೀತೆಗಳು ಮಾತ್ರ ಹೆಂಡಕುಡಕನವು.) ಎರಡನೆಯದು, ಪ್ರಾಚೀನ ಜರ್ಮ ಸಾಹಿತ್ಯದ ಒಂದು ದೃಶ್ಯದ ಪ್ರಭಾವದಿಂದ ಬರೆದುದು. ಕಡೆಯ ‘ಬಡವರ ಬಾಸೇಗರ್ತ’ ಎಂಬುದು ಹೆಸರೇ ಹೇಳುವಂತೆ—ಬಡವರ ಭಾಷೆಗೆ ಅರ್ಥ.

ತಾನು ಇನ್ನಿಂತಹುವನ್ನು ಬರೆಯುವುದಿಲ್ಲೆಂದು ತನ್ನ ತಲೆಹರಟೆಯಲ್ಲಿ ಬೇವಾರ್ಸಿಯೇನೋ ಒತ್ತಿ ಒತ್ತಿ ಸಾರಿದ್ದಾನೆ. ಆದರೆ, ಪುಸ್ತಕದ ತುಂಬ ಗಾದೆಗಳ ಗೋಪುರಗಳನ್ನೆತ್ತಿರುವ ಬೇವಾರ್ಸಿಗೆ ‘ತಾನೊಂದು ಎಣಿಸಿದರೆ ದೈವ ಬೇರೊಂದ ಎಣಿಸಿತು’ ಎಂಬ ಗಾದೆಯು ತಿಳಿಯದೆಂದರೆ ತೀರ ಅನ್ಯಾಯವಾದೀತು. ಸದ್ಯಕ್ಕೆ ಮರೆತಿರುವನೆನ್ನೋಣವೆ ?

೧೫-೧-೩೪ }
ಮೈಸೂರು. }

ಜಿ. ಪಿ. ರಾಜರತ್ನಂ.

## 'ಹೆಂಡದ ಹೆಣ'ಕ್ಕೆ ಅರಿಕೆ

ಪಾನನಿರೋಧದ ಸಂಬಂಧವಾಗಿ ಮೂವತ್ತು ನಿಮಿಷಗಳೊಳಗೆ ಆಡಬಹುದಾದ ಏಕಾಂಕ ನಾಟಕವೊಂದನ್ನು ನಾನು ಬರೆದುಕೊಡಬೇಕೆಂದು ನಮ್ಮ ಸರಕಾರ ಅಪೇಕ್ಷಿಪಟ್ಟದ್ದರಿಂದ ಈ 'ಹೆಂಡದ ಹೆಣ'ವನ್ನು ಬರೆಯುವುದಾಯಿತು. ಸರಕಾರದ ಅಪೇಕ್ಷೆ ಒಂದು ನಿಮಿತ್ತ; ಪಾನನಿರೋಧದ ಗಾಂಧೀ ತತ್ತ್ವದಲ್ಲಿ ನನಗೂ ನಂಬಿಕೆಯುಂಟು.

ಆಡುವವರಿಗೂ ನೋಡುವವರಿಗೂ ಈ ರೂಪಕ ರುಚಿಯಾದರೆ ಸಂತೋಷ.

೨೨.೧೧ ೧೯೫೪.
ಸೆಂಟ್ರಲ್ ಕಾಲೇಜ್, ಬೆಂಗಳೂರು.

ಜಿ. ಪಿ. ರಾಜರತ್ನಂ.

*　　　*　　　*

ಇದರಲ್ಲಿಯೂ ಹೆಂಡದ ಸಾಮಾನಾಧಿಕರಣ್ಯ ಇದೆ ಎಂಬ ಕಾರಣದಿಂದ ಇದನ್ನು ನರಕದ ನ್ಯಾಯ, ಕಂಬಳಿ ಸೇವೆಗಳೊಂದಿಗೆ ಅಚ್ಚುಮಾಡಿದ್ದೇನೆ.

೧.೯.೬೮.

ರಾಜರತ್ನಂ.

## ತಲಆರಟಿ

ಈ ಪುಸ್ತಕ ಓದ್ದೋರು ನೀವ್ಯಾರಂನಾ 'ಓ ನವಿಲ್ನೋಡಿ ಕೆಂಬೂತ
ಪುಕ್ಕ ತರಕೋಂತಯ್ಯ' ಅನಬೌದು ; 'ವುಲೀನ್ನೋಡಿ ನರಿ ಬರೆ ಆಕ್ಕೋ
ತ್ತಂತೆ' ಅನ್ಬೌದು ; ಇಲ್ದೆ ಓದ್ರೆ 'ವೋಡ ನೋಡಿ ನವಿಲ್ಕುಣಿದ್ರೆ, ಗೂಬೇ
ನ್ನೋಡಿ ಕೋಳಿ ಕುಣೀತು' ಅನಬೌದು. ಇಂಗೇ ಇನ್ನೇನಾರ ನಿಂನಿಂಬುದ್ದಿ
ಇದ್ದಂಗೆಲ್ಲ ಅನಬೌದು ! ಅಂಗದಕೇನೆ ನಿಮ್ಗಿಂತ ಮುಂಚೆ ನಾನೇ ಅಂದ್ಬು
ಟ್ಟೇನಿ. ಇದರ ಮೇಲ್ನೀವಿನ್ನೇನಾ ಯೋಳಾದು !

ನಾನೂ ಒಸಿ ಇಸ್ಕೋಲು ಕಾಲೇಜು ಇದಕೆಲ್ಲ ಮಣ್ಣಾಕಿರಾನು.
ಸುಂಕೇಂತನ್ಕೊಬೇಡಿ ! ನಾನೂ ನಿಮ್ಮಂಗೇನೆ ಓದ್ತಾನಿದ್ದೆ, ಬರೀತಾನಿದ್ದೆ.
ಆದ್ರೆ ಒಂದೊಸಿ ವರ್ಸ ಆ ಯೆಂಡಕುಡಕನ್ಜತೆ ಬಿದ್ಬುಟ್ಕೆ, ನನ್ವಾಸೇನೆಲ್ಲ
ಆಳಾಗೋಯ್ತು. ದೊಂಸಾಗೋಯ್ತು, ಕುಲಗೆಟ್ಟೋಯ್ತು. ಆದ್ರೂನೆ
ನನ್ನೋಸ್ತೀವ್ರೂಸಿ ಜನ "ಏ ಬೇವಾರ್ಸಿ ! ನಾಯಿ ಸತ್ರೆ ಬಾಯಿ
ಮುಚ್ಕೋಂತು. ನಿನ್ವಾಸೆ ಆಳಾಗೋದ್ರೇನ್ ಲೋಕಾಸ್ತಮಾನಾಗೋ
ಯ್ತದ ? ಯಾವ ಲೋಕ ಮುಳಗೋಯ್ತದೆ ನೀನಾಡ್ದೆ ಓದ್ರೆ ? ಇನ್ನಾ ಆ
ಯೆಂಡಕುಡಕ ಆಡ್ದಿದ್ರೆ ಎಂಗಾಯ್ತದೆ ? ಸಂಸಾರ ಮಾಡೋ ಗರ್ತಿ ಸೀರೆ
ಉಡೋದ್ಮರತಂಗಾಯ್ತದೆ ! ಸುಂಕೆ ನಾವೇಳ್ದಂಗ್ಕೇಳು. ಆ ಕುಡಕನಿಂದ್ದೊಂಟೆ
ಓಗು. ಪಾಲಿಗೆ ಬಂದದ್ದು ಪಂಚಾಮ್ರುತ ಅಂತ ಔನಾಡ್ನೆಲ್ಲ ಬರಕೊ.
ದೊಡ್ಡೋರ್ಮಾತ್ಕೇಳು" ಅಂದ್ರು. ನನಗೂ ಅಂಗೇ ಅನ್ನಿಸ್ತು—ರಂಗನ
ಮುಂದೆ ಸಿಂಗನಾ ಅಂದಂಗೆ. ಅಲ್ದೇನೆ. ಯೆಂಡ ಕುಡದೋರಂಗಾಡಾಕಾ
ಯ್ತದ ಎಳನೀರು ಕುಡದೋರು !

ಸರಿ ಮಂತೆ ! ಐತ್ವಾರದಿಂದೆ ಸೋಮಾರ ಒಂಟಂಗೇ ಒಂಟೆ. ಆ ಯೆಂಡ
ಕುಡಕ ಬಾಯಿಬಿಟ್ಟರೆ ಬಾಳೇಅಣ್ಣು, ಉಗಿದರುಪ್ಪಿನಕಾಯಿ ಅಂತ ಔನಂದಿ
ದ್ನೆಲ್ಲ ಜಮಾಯ್ಸಾಕ್ದೆ. ನೋಡ್ದೋರೂನೆ ಒಸಿ ತಾರೀಪ್ಮಾಡಿದ್ರು. ಅದೆಲ್ಲ
ತಾಜಾನೆ—ನಿನ್ ಬುಂಡೇಮೇಲೊಡೀದಿರೋ ಗಂಟೆ. ಯಾವನ್ತಂಟೇನೂ
ಬೇಡಾ ನಂಗೆ ಅಂತ ನಿನ್ನಸ್ಟಕ್ಕೇನಿದ್ರೂನೆ ನಿಂಗೆಂಗಾರ ಬಂದಿಕ್ಕೋಂತದೆ
ವಕ್ರ !

ನನಗೂನೆ ಅಂಗೇ ಆಯ್ತು—ಯೆದರತಿದ್ದೆಂಗಸಿನ ಮೇಗೆ ಕಪ್ಪೆ
ಆಕ್ದಂಗೆ. ಒಂದ್ದಿನ ಇದ್ಕಿಂದ್ದಂಗೇನೆ ರತ್ನ ಬಂದಿದ್ದೇನೆ ನನ್ನೇನಾರ ಬರಿ
ಅಂದ ! ಎಲ್ಲಾ ಬುಟ್ನನ್ನ ! ತಣ್ಣಗ್ಕುಂತಿದ್ದೋನ್ನ ತಿವೀದ್ಕುಣೀಸಿದ್ರು ಅಂದಂ

ಗಾಯ್ತು. ನಾನೆಂಗೆಂಗೋನೆ ನೋಡ್ದೆ ನುಣೀಚ್ಕೊಳ್ಳೋಂವ ಅಂತ. ಆದರೌನ್ಬುಡಬೇಕಲ್ಲ—ಜಿಗಣೆ ಅತ್ದಂಗೆ!

ಔನ್ಗೇನಣ್ಣ—ಆಡೋದು ಅಂದ್ರೆ ಅಸಿ ಗೋಡೇಗ್ಕಲ್ಲೊಡದಂಗೆ. ನಮ್ಮತ್ರ ಬಂದಾಡು ಅಂದ್ರಾದಾತ—ಬಳೆಗಾರನಂಗಡೀಲಿ ಬಾಳೆಅಣ್ಕೇಳ್ದಂಗೆ. ಏನೋ ನಾವೂನೆ ಬಡವಾ ನೀ ಮಡಗಿದಂಗಿರು ಅಂತ ಸುಂಕಿದ್ರೆ—ಬೆನ್ನತ್ತಿದ ಬೇತಾಳ ಸುಂಕಿರಬೇಕಲ್ಲ—ವಟ್ಟೆ ಕೊಟ್ಟೋರ್ತು ಸೆಟ್ಟೆ ಬುಡ ಅಂದಂಗೆ. ಇಸ್ಟರ ಮೇಲೆಂ—ನಾವಾಡಾಕೊಂಟ್ರೆ—ಕುಡಿಕೆ ಮಾಡಾಕ್ಬರದ ಕುಂಬಾರ ಗುಡಾರ ಮಾಡಾಕೋದಂಗಾಯ್ತದೆ. ಅಲ್ದೇನೆ ನಾವೆಲ್ಲಾ ಆಡಾಕ್ಕುಂತ್ಕೊಂಬುಟ್ರೆ—ಎಲ್ಲಾರೂ ಪಲ್ಲಕ್ಕೀಲ್ಕುಂತ್ರೆ ಅಡ್ಡೇಗ್ಯಾರಣ್ಣ ಯೆಗಲು ಕೊಡೋರು? ಸರೆ, ಔನತ್ರ ಎಸ್ಟೇಳ್ಕೊಂಡ್ರೇನ್ಸಂತು—ಬಾಳಿ ಬದುಕೋಮುಂಡೆ ಬೋಳ್ಮುಂಡೆ ಅತ್ತಂಗೇನೆ. ಸುಂಕದವನತ್ರ ಸುಕದುಕ್ಕ ಯೋಳ್ಕಂಡ್ರೆ ಕೊಂಕಳ್ನಲ್ಲೇನದೆ ಅಂದಿ ಕೈ ಆಕದ್ನಂತೆ! ಏನಿಲ್ಲ ಯೆಂಡಕುಡಕನ ಮಾತಂದ್ರೆ—ಔದು ಬಸವಾ ಔದು, ಅಲ್ಲ ಬಸವಾ ಅಲ್ಲ! ಔನ್ಮೇಲ್ರೇಗೋವಂಗ್ಯಾಡ ಇಲ್ಲ. ಏನಾರ ರೇಗಿದ್ರೆ—ಬಡವನ್ಕೋಪ ದವಡೇಗ್ನಾಪ ಅಂತ ಕೇಳಿಲ್ವಾಣ್ಣ?—ಕೊಳದತ್ರ ಕೋಪಾ ಮಾಡ್ಕಂಡ್ಕಾಲ್ತೊಳೀದೆ ಓದ್ರೆ ಯಾರ್ಗಣ್ಣ ನಸ್ಟ? ಸರಿ, ಇನ್ನೇನ್ಮಾಡಾಕಾಯ್ತದೆ? ಮುದ್ಬೇಗೆದ್ದ ಗುದ್ಲೀಗ್ಬಿದ್ದ ಅಂದಂಗೆ, ಪದ ಬರಕೊಳ್ಳಾಕ್ಮಾತ್ರ ಬೇಕು, ಈಗ್ಬೇಡಾಂದ್ರಾಯ್ತದ? ಅದೂ ಅಲ್ದೇನೆ, ಕಾರೇವಾಸಿ ಕತ್ತೆ ಕಾಲ್ಕಟ್ಟು ಅಂತ ಒಂದ್ಗಾದೆ ಅದೆ. ಗಾದೆ ಅಂದ್ರೇನಣ್ಣ—ಸಾದಾರಣಾನ—ಒಬ್ಬನಸಂಗೊಂದ್ಸಾವಿರ ಗುದ್ಬಿದ್ರೆ ಒಂದ್ಗಾದೆ ಆಯ್ತದಂತೆ! ಅಂಗಂದ್ಮೇಲೆ—ಅನ್ಬಾವಸ್ತರ ಮಾತಲ್ಡ ಮಾಡಿದ್ರೆ ಉದ್ದಾರಾಯ್ತಾರ ಯಾರಾನ?

ಸರಿ ಮತ್ತೆ. ಅ ಆ ಬರದೇ ಓದ್ರೆ ಅಮರಾನಾರೂ ಯೋಳು ಅಂತಾರಲ್ಲ, ಅವರಂಗೆ ಅಂಗೂ ಇಂಗೂ ಮಾಡಿ ಏನೋ ಬರದಾಕ್ದೆ. ಕುರೆ ಯೇಳೋದ್ನೆ ಕಾಯ್ತಾನಿತ್ತು ಜೊಕ್ಕೆ ಅಂದಂಗೆ, ಬಂಡಾಟ ಮಾಡಿ ಬರೀಸಿದ್ನಲ್ದ ಅಂತ ಅಟಾ ಇಡ್ದು ಅಚ್ಗೊ ಆಕಿಸ್ಬೇಕ ಇದನ!

ಅಸ್ಟಲ್ದೆ ಅಂತಾರೇನಯ್ಯ—ಅತಿ ಸ್ನೇಹ ಗತಿ ಕೆಡಿಸ್ತು ಅಂತ! ಏನೋ ಊವೀನ್ಜೊತೆ ನಾರು ಅಂತಿದ್ದೋನ್ನ ಯಿಂಗೊರಗೆಳದಾಕ್ಬುಟ್ಟೆ ಮಾನ ಕಳಿಯಾದ! ಬೆಳಗಾದ ಮೇಲಲ್ವ ತಿಳಿಯಾದು ಅಳಿಯನ ಕುರುಡು? ಈಗ್ಬೇಯ್ತದೆ ನಂ ಬೇಳೇಕಾಳು—ಸಾರನ್ಕ ಚೆನ್ನಾಯ್ತದೆ, ನೀರ್ಮಾತ್ರ ಒಸಿ ಜಾಸ್ತಿ ಅಂದಂಗೇನೆ.

ಆದ್ರೂನೆ ಈ ಬರಾವನ್ರತ್ನ ಬಲೆ ತಾರೀಫ್‌ಮಾಡೌನೆ. ಔಸ್ಗಿದನ್ನೋದಿ ಓದಿ ನನ್ಬಾಯೆಲ್ಲ ನೋವತ್ಕೊಂಬುಟ್ಟದೆ. ಅಂದಾಕ್ಸ್ನ, ಎತ್ತೋರ್ಗೆಗ್ನ ಮುದ್ದಾದ್ರೆ ಎತ್ಕೊಳ್ಳೋರ್ಗೆಮ್ಕೆ ಮುದ್ದಾಯ್ತದ ?

ಹುಂ ! ಕಾಸ್ಕೊಟ್ಟಾಯ್ತು, ಒಗೆಸೊಪ್ಪುಟ್ಟಾಯ್ತು. ಸುಂಕ್ಯಾಕಿನ್ಮಾತು ? ಇದನ್ನೋದೋರ್ಗೆ ನಿಮ್ಗೆ ಈಗ್ಲೆ ಒಂದ್ಮಾತೇಳ್ಬುಡ್ತೀನಿ. ಈ ಒಂದ್ದಫ ಮಾಫ್ಮಾಡ್ಬುಡಿ. ಏನೋ ಬರದ್ಬುಟ್ಟೆ. ಅಚ್ಚಾಗಕ್ಬುಟ್ಟೆ. ಇನ್ನವರಪ್ರಾಣೆ, ಪ್ರಾಣ ಓದ್ರೂನೆ ಸೈ, ನನ್ಗೂ ಔನ್ಗೂ ತೊರದೋದ್ರೂನೆ ಸೈ. ಇನ್ನಾನಾಡಾಕಿಲ್ಲ. ಅಪ್ಪಿ ತಪ್ಪಿ ಆಡಿದ್ರೂನೆ ಅಚ್ಚಾಗಕಾಕಿಲ್ಲ, ನಿಮ್ಮುಂದೆಸೆಯಾಕಿಲ್ಲ. ಈ ಒಂದ್ಸಲ ಮಾಫ್ಮಾಡ್ಬುಡಿ.

ಕಡೇಗೊಂದ್ಮಾತು. ನಾನೂನೆ ಆಡೋತನಕ ಆಡ್ತೀನಿ, ಕಡೇಗ್ಬದ ಮುಚ್ಕೊಂಡೋಯ್ತೀನಿ. ನಿಂಗೇನಾರ ಬೇಜಾರಾದ್ರೆ, ಅಂಗೇನೆ ಬುಕ್ಕನ್ಬಚ್ಚಲ್ಲಾಕ್ಬುಡಿ—ವಿಟ್ಟಲಬಟ್ಟರ ಪುರಾಣ ಬಿಟ್ಟಲ್ಲಿಗೇನೆ ಸೈ ಅಂತ. ಕಾಸ್ವಾಪೀಸ್ಬೇಕಂದ್ರೆ ರತ್ನ ಪಡಕಾನೇತಾವ್ಬಟವಾಡೆ ಮಾಡ್ತಾನಂತೆ. ಆದ್ರೇನೆ ಆಗ್ಲಿ ಬೊಯ್ತ ನಿಂತ್ಕೊಬೇಡಿ. ಯಾಕಂದ್ರೆ—ಬೊಯ್ಯೋ ಬಾಯಿಗ್ಬ್ರಮ್ಮನಪ್ಪನೇನ ಅಂದಂಗೆ—ಒಲ್ಲದ ಗಂಡಂಗೆ ಮೊಸರಲ್ಕಲ್ಸಿಕ್ದಂಗಾಯ್ತದೆ. ಅದಕೇನೆ ಯೋಳಾದು—ಬೇಜಾರಾದ್ರೆ ಬಚ್ಚಲ್ಲಾಗಕಿ. ಬೊಯ್ಮಾತ್ರ ಬೇಡ. ಸಲಾಂ.

—ಬೇವಾರ್ಸಿ

# ಬುಕ್ಕಿನ್ ಜೀವಾಳ



" ಕುಡಕಂಡಾಡ್ತ ಕುಂತ್ಕಂಡೌನೆ ಯೆಂಡಕುಡಕ ರತ್ನ !
ನಿಂತ್ಕಂಡದನಂಗ್ಳೀಚ್ಯೊಂತೌನೆ ಜೇಸಾರ್ಸಿ ರತ್ನ ! "

ಚಿತ್ರಕಾರರು—ಶ್ರೀಮಾನ್ 'ರಾಘವೇಂದ್ರ'.

## ಪರದೆ ಮುಂದ್ಬರೋರು

ಯಮ

ಚಿತ್ರಗುಪ್ತ

ಮಂತ್ರಿಗೊಳ್ಮಾರ್ಜನ

ಯೆಂಡಕುಡಕ ರತ್ನ

ಒಬ್ಬ ಜವಾನ

[ ಇನ್ನೂ ಒಸಿ ಜನ ಜವಾನರಿಂದ್ರೇನ್ನಷ್ಟ ಇಲ್ಲ ]

# ನ ರ ಕ ದ  ನ್ಯಾ ಯ

[ ನರಕ. ಯಮನ ಮನೆ ಕೋಣೆ. ಯಮನ್ಗೆ ಕಾಲುಳಕೋಗದೆ. ಒಂದಾಸ್ಗೆ ಆಸ್ಕೊಂಡ್ಮನೀಕ್ಕೊಂಡೌನೆ. ಕೈನಾಗೊಂದು "ಯೆಂಡಕುಡಕ ರತ್ನ" ಅದೆ. ಅದನ್ನೋ ದಾಕ್ಕೋಗ್ತಾನೆ, ಓದಾಕ್ಬರದು. ಅದಕೆ ರೇಗೋಗದೆ. ಸುತ್ತ ಮೂರು ಜನ ಮಂತ್ರಿಗೊಳ್ಪರಿವಾರ ನಿಂತ್ಕೊಂಡದೆ. ಯಮ ಔರ್ಮೇಲ್ರೇಗೌನೆ. ಪರದೆ ಎತ್ತಿದ್ದಂಗೇನೆ ಸಿಡಿ ಸಿಡಿ ಅಂತ್ತಾನೆ. ]

**ಯಮ**—ಎಲ್ಲಾರೂನೆ ಇಟ್ಟುಂಡ್ಕೊಂಡೊಟ್ಟೆ ಬೆಳಸೋ ಗಟ್ಟಿಗರೇನೆ! ಒಬ್ಬನ್ನಾಗ್ರ ಓ ಅಂದ್ರೆ ಟೋ ಅನ್ನಾಕ್ಬರಾಕಿಲ್ಲ! ನಾನೂ ನೋಡ್ತೀನಿ ಅದ್ನೈದ್ದೀಸ್ಟಿಂದ—ಈ 'ಯೆಂಡಕುಡಕ ರತ್ನ' ಓದಾಣಾಂತ—ಇದರಾಗೇನೋ ಬ್ರಮ್ಮಂಗೊಸಿ ಯೆಂಡ ಕುಡೀಸೌನಂತೆ ಔನು—ಸುಡಗಾಡು ಓದಾಕೇ ಆಗ್ದು. ನಿಮಗಾರ ಓದಾಕ್ಬರತದಾ ಅಂದ್ರೆ—ಎಲ್ಲಾ ಮಂಕ್ದಿಣ್ಣೆ ಮಾರಾಜ್ರೇನೆ—

**ಒನ್ನೆ ಮಂತ್ರಿ**—ದಣಿಯೋರ್ಬುದ್ದೀಗೇನೆ ಗೋಚರಾಗ್ದೆ ಓದ್ಮೇಲೆ, ನಮ್ಮಂತೆ ಗರೀಬ್ರು—

**ಯಮ**—ಮುಚ್ಕೊ ಬಾಯಿ, ಗುಲಾಮ! ಕಪ್ಪೆ ಬುಟ್ಟಂಗ್ಬುಡತಾನೆ ಬಾಯ್ನ! ದಣಿಯೋರ್ಗೆ ಗೋಚರಾಗ್ದೆ ಓದ್ನ ತಿಳಿಸಾಕಲ್ವ ಇಟ್ಕಂಡಿರಾದು ನಿಮ್ನ— ಮಂತ್ರಿಗೊಳ್ನ? ದಂಡಪಿಂಡ ತಿನ್ನಾಕ? ಅಜ್ಞಾನ!

[ ಬಾಗಿಲನಾಗೇನೋ ಸದ್ದಾಯ್ತದೆ. "ಐ! ಬುಡೋಲೇ ಅಂದ್ರೆ ಬುಡ್ಬೇಕು. ಕುಡಕರ ಸಾವಾಸ ಬಲೆ ಕೆಟ್ದು! ಬೇಡಾ ನೋಡು. ಕುಡಕನ್ಕೈಣಕಿದ್ರೆ ಗೊತ್ತೈತಲ್ಲ—ಕ್ಯಾಕರ ಸುಗ್ದಿ ಕೆರ ತಕ್ಕೊಂಡ್ಕುಟ್ಬುಟ್ಟಾನು. ಬೇಡಾ! ಬೇಡಾ!" ಅಂತ ಕೂಗ್ಕೇಳೀಸ್ತದೆ. ]

**ಯಮ**—ಏನಾ ದೊಂಬಿ ಅದು? ದಾಸಯ್ಯನೋರ್ಸಂತೆ ಕೆಟ್ಟೋಯ್ತೇನ್ಲ ನರಕಾಂತಂದ್ರೆ!

[ ಯಮನ ಕಡೆ ಜವಾನರಿಬ್ರು ಯೆಂಡಕುಡಕ ರತ್ನನ್ನ ಇಡಕೊಂಬತ್ತಾರೆ. ಬಿಡಿಸ್ಕೊಳ್ಳಾಕ್ರತ್ನ ಒದ್ದಾಡ್ತಾನೆ. ]

**ಯಮ**—ಯಾರ್ಲ ಔನು—ಬುಟ್ಟೇಗ್ಬಿದ್ಮೇನ್ನಂಗೊದ್ದಾಡೋನು ?

**ರತ್ನ**—ಬಲ ! ನರಕದಾಗೂನೆ ಮೀನುಣ್ತಾರ !....ಆ !....ಇದುವರಗೂನೆ ಬೂಮ್ಯಾಗಿರೋಗಂಟ ಕಂಡೋರೆಲ್ಲ ಕಾಸೆಸ್ಟೈತೊ ಅಂತಿದ್ರು. ಇವನ್ಯಾವ್ನೊ ಸಿಕ್ಕ್ಯಾನೀಗ—ನೀನಾರೋ ಅನ್ನಾಕೆ ! ಸ ವಾ ಲಾ ಕೋ ೯ ನ್ ನೀನ್ಯಾರಾ ಮಾರಾಯ ?

**ಯಮ**—ನರಕದಾಗೆ ಯಮ ಅನ್ನೋನೊಬ್ಬ ಔನೆ ಅಂತ ಗೊತ್ತಾ, ನಿನ್ಗೆ ?

**ರತ್ನ**—ವ್ಹಾ ! ನೀನಾ ಯಮ ! ಕರ್‍ರಗಿದ್ದೋನೆಲ್ಲ ಯಮಾ ಆಗೋಗ್ಬುಟ್ರೆ—ನೊರೆ ಬಸ್ಸಿದ್ದಲ್ಲ ಯೆಂಡಾನೆ !....ಆ....ಅದಿರ್‍ಲಿ....ನಿನ್ಸುತ್ತ ಗೇರಾಯಿಸ್ಕೊಂಡಿ ರೋರ್‍ನ ನೋಡಿದ್ರೇನೆ ನೀನ್ಯಮಾ ಇದ್ದಂಗೇ ಇದ್ದೀಯ....ಆದ್ರೂನೆ, ನೀನ್ಯಮ ಆದ್ರೆ ನಂ ಬೂಮ್ಯಾಗಿನ್ಕುಡಿದೋರ್ಮಾತಾಡ್ದಂಗೇ ಆಡ್ತೀಯಲ್ಲ ಅದ್ಯಾಕೆ ?

**ಯಮ**—ನೀನಾಡ್ದಂಗೆ ಇನ್ಯಾವ್ನಾರ ತಲಹರಟೆ ಆಡ್ತಿದ್ರೆ—ನೆರಕಾಕ್ಬುಡ್ತಿದ್ದೆ ಈಸೊತ್ಗವನ್ನ ! ಆದ್ರೆ ನಿನ್ನೋಡಿದ್ರೆ ಯಾಕೋ ಒಸಿ ಅಂಗಂಗನ್ನಿಸ್ತದೆ. ನೋಡು, ನಾವೆಲ್ಲ ಮನೆಯಾಗಾಡೋ ಬಾಸೇನೇ ಇಂಗೆ. ಆದ್ರೆ, ಒರಗ್ನೋರ್ಯಾರಾನ ಬಂದಾಗ, ದೊಡ್ಡೋರನ್ನೇಸ್ಕೊಂಡೋರು, ಏನೋ ಅವ ರೆದ್ರುಗೊಸಿ ಆಟ ಕಟ್ಟಾಕೆ, ಸಮುಸ್ಕ್ರುತ ಗಿಮುಸ್ಕ್ರುತ ಜೋರಾಗಾಕಿ, ಯಾರ ಕೈಲಾರ ಬರೀಸ್ಕೊಂಡು, ಪಸಂದಾಗನ್ತೀವಿ. ಅವರತ್ತಾಗೋಯ್ತಂದ್ರೆ—ಯತಾಪರ್ಕಾರ....ಇಷ್ಟೆಲ್ಲಾ ಆಯ್ತು, ನೀನ್ಯಾರೇಳ್ನೇ ಇಲ್ವಲ್ಲೋ !

**ರತ್ನ**—ಈ ನರಕಕ್ಕ್ಯಾರಾರ ಯಿಂದೆ ಬಂದೋರು ನನ್ನೆಸರೇಳಬ್ದಾರಾ ನಿನ್ಗೆ ?—ಯೆಂಡಕುಡಕ ರತ್ನಾಂತ !

**ಯಮ**—ಆ ! ನೀನೇನಾ ಯೆಂಡಕುಡಕ ರತ್ನ ! ಬಾ! ಬಾ! ಬಾ! ಬಾ! ಬಾ! ಮೊದಲೇ ಯೇಳ್ಬಾರ್ದಾಗಿತ್ತ ತಮ್ಮಯ್ಯ ! [ನಿಲ್ಲಾಕೋಗಿ ಬೀಳ್ತಾನೆ. ಮಳ್ಳಿ ಸರೀಕ್ಕಂತ್ಕೊಂಡಿ—] ಬಾ ! ಇಲ್ಲೇ ಈ ಆಸ್ಗೆ ಮೇಗ್ಕುಂತ್ಕೊ. ಈ ಕಾಲ್ನೋಡು ಒಸಿ ಉಳಕೋಗ್ಬುಟ್ಟೆ ಅದ್ನೈದೀಸ್ದಿಂದ ಅದೇನ್ಮಾಡೆ ಕೊಡತದೆ ಅಂತ—

**ರತ್ನ**—ಅಲ್ಲ ಯಮಣ್ಣ. ನಿನ್ಕಾಲುಳಕೋಗಿದ್ರೆ ಆ ದನ್ಮಂತ್ರಿ ಕೈಲೊಸಿ ಮಂತ್ರ ಆಕಿಸ್ಬಾರ್ದ ! ನಿಮ್ಮಾನೇನೆ ಔನು, ದುಡ್ಡೂ ಕೊಡಬೇಕಾಗಿಲ್ಲ.

**ಯಮ**—ಐ ! ಸುಂಕಿರ್ರತ್ನ ! ಎಲ್ಲಾ ದನ್ಮಂತ್ರೀನೇನೆ ! ದನ್ಮಂತ್ರಿ ಒಬ್ಬ ದೊಡ್ಡಾ ಕ್ವ್ರು ! ಯಿಂದೆ ಅಮ್ರುತ ತಂದಾಗ, ಆ ಕೊಡ ಒಸಿ ಬಾರ ಬಿದ್ಬಲ್ಗೆ ಲ ನೋವಾಗೋದ್ರೆ—ಅದಕ್ಕ್ಯಾಕಸ್ದಿ ಆಕಾಕ್ಬರ್ನಿಲ್ಲ ಔನ್ಗೆ! ಅದಂಗೇ ನಿಂತೋಯ್ತು. ಈಗೆಡ್ಚ ಆಗೌನೆ. ತಂಗೇ ಔಸ್ದಿ ಮಾಡ್ಕಳ್ದಿ ಇದ್ದೋನು ಇನ್ನಂಗ್ಮಾಡ್ಯಾನ ? ಯಾಕೆ—ಒಸಿ ಉಳಕೋಗಿದ್ಕಾಲ್ನ ಔಂಕ್ಯೆಗ್ಕೊಟ್ಬುಟ್ಟೆ, ಇದ್ದದ್ದೂ ಕೆಡೀ ಸ್ಕಂಡ್ಯ ಬಡದಾಸಯ್ಯ ಅಂದಂಗೆ....ಇನ್ನಾ ನವ್ಮೋನು ಅಂತ ಓಗು—ಕೇಳಿಲ್ವ ಗುರುತು ಕಂಡ ಕಳ್ಳ ಜೀವಸಯಿತ ಬುಡ ಅಂತ! ಐ! ಸುಂಕೆ ಎತ್ತ್ರಪ್ಪ ದನ್ಮಂತ್ರಿ ಮಾತ್ನ! ಸಂಬ್ಳ ಜೋಬೀಗಾಕ್ಕಂಡೆಸರಿಟ್ಕಂಡ್ಕುಂತಿರಾಕೆ ದನ್ಮಂತ್ರಿ!

ರತ್ನ—ಓಗ್ಲಿ, ದನ್ಮಂತ್ರಿ ಬೇಡಾಂತಂದ್ರೆ ಅಸ್ವಿನಿ ಕುಮಾರ್ರಿಲ್ವ ?

**ಯಮ**—ಅಸ್ವಿನಿ ಕುಮಾರ್ರು—ಅದೊಂದ್ದಿವ್ಯ! ಔರುಟ್ಟಿ ಎಸ್ಟ್ದಿನ ಆಯ್ತು ನೋಡ್ಕೊ—ಮೊಕದ ಮ್ಯಾಗೆ ಮಾದ್ರೀಗೆರಡು ಮೀಸೆ ಇಲ್ಲ. ತಿಕ್ಕ್ಯಾತ್ರೆ ತಿಕ್ಕ್ಯಾತ್ರೆ ತಿಕ್ಕ್ಯಾತ್ರೆ ಮುಲಾಮ್ನ—ಅಗ್ಲು ಸಂಜೆ, ಸಂಜೆ ಅಗ್ಲು—ಅದನ್ಕ ಮೊಳೀಲೇ ಒಲ್ದು! ಐ! ಸುಂಕಿರಪ್ಪ —ತಂತಂ ತಾಪತ್ರೆ ತಟಾಯಿಸ್ದೆ ಓದೋರು ಕಂಡೋರ್ಕಸ್ಟ ಕಳದಾರ ? ನಂನಂ ಜನ ಅಂಚ ನಾವೂನೆ ಸುಂಕಿರಬೇಕು ನೋಡು—ಇಸ್ಟಕ್ಕೂನೆ ಈಗಾಗ್ಲೆ ವಾಸಿ ಆಗ್ತ ಬಂದದೆ. ಇನ್ನೊಂದೆಳ್ದಿನ....ಆ ! ನೋಡ್ದ ಮರತ್ಬುಟ್ಟಿದ್ದೆ ..ಆ...ಬ್ರಮ್ಮಂಗೊಸಿ ಯೆಂಡ ಕುಡಿಸ್ತೀನಂತ ಆಡಿದ್ದೀಯಲ್ಲ... ಅದ್ನೊಸಿ ಓದ್ತೀಯ ?....ಬುಕ್ಕೂನು ಇಲ್ಲದೆ ನೋಡು....

ರತ್ನ—ಬುಕ್ಕು ಗಿಕ್ಕು ನಂಗ್ಯಾಕಣ್ಣ !—ನಂಗೋದಾಕ್ಬರಾಕಿಲ್ಲ....ಆ.... ನೋಡು....ನೀನ್ಕಾಲೀನುಳಕ್ಕಾತಾಡ್ತ ನಂಗೂ ನೆಪ್ಪೇ ಬನ್ನಿಲ್ಲ....ನೋಡು ಯಮಣ್ಣ....ನನ್ನ ನರಕಕ್ಕೆಳಕೊಂಬಂದದ್ದು ಅನ್ಯಾಯ ಯಮಣ್ಣ....ದರ್ಮ ಅಲ್ಲ ಇದು....ದರ್ಮ ಅಲ್ಲ ಯಮಣ್ಣ....ದರ್ಮ ಅಲ್ಲ....

**ಯಮ**—ರತ್ನ ! ನೀನೀಗ ಬೂಮೀಗಿಲ್ಲ—ಇರೋದು ನರಕದಾಗೆ ! ನೀನೇ ನೆದಕೋರ್ಬೇಡ. ಇಲ್ನಿಂಗವ್ವಲ್ ದರ್ಮ ಸಿಕ್ತದೆ. ಇಲ್ಲೇನದರ್ಮ ನಡಿ ಯಾಕಿಲ್ಲ—ಎದಕೋರ್ಬೇಡ. ನಾನ್ನಿನ್ಕೇಸ್ನ ಸಂಗಿತ್ಯರ್ತ ಮಾಡ್ತೀನಿ.... ನೀನೇನೋ ಅಪರೂಪಕ್ಬಂದಿದ್ದೀಯ ನಮ್ಮನೇಗೆ—ದೇವರ್ಬಂದಂಗೆ ! ಏನ್ಬಿನಾ ಬತ್ತೀಯಾ ! ಏನೋ ಬಂದಿರೋವಾಗೊಸಿ ಅಂಗೇ ಆಡ್ಬುಡು. ಆಮೇಕ್ನಿನ್ಕೇಸ್ನ ಫೈಸಲ್ಮಾಡಾನೆ !

ರತ್ನ—ಅದೆಲ್ಲ ಸರಿ ಯಮಣ್ಣ. ಆದ್ರೆ ಯೆಂಡ ಇಲ್ದೆ ನಮಗಾಡಾಕಬ್ಯಾಸ ಇಲ್ಲ. ಒಸಿ ಯೆಂಡ ಇದ್ರೆ—

ಯಮ—ಏನ್ಲಾ ಎಲ್ಲಾರೂನೆ ನಿಂತ್ಕೊಂಡ್ಬುಟ್ರ ಸುಂಕೆ! ಓಗೊಂದ್ಲೋಟ ಅಮ್ರುತ ತರಾಕಿಲ್ವ?....ಓ ಇಲ್ಲೀ ಅದಲ್ಲ....

[ರತ್ನಂಗೊಸಿ ಅಮ್ರುತ ಕೊಡತೌನೆ.]

ರತ್ನ—[ಒಸಿ ರುಚಿ ನೋಡಿ ಉಗಳ್ತ] ಥು! ಏನ್ಯಮಣ್ಣ ಇದು ಸಕ್ರೆ ಪಾನ್ಕ!

ಯಮ—ಅದು ಅಮ್ರುತ ರತ್ನ! ದೇವತೆಗೊಳೆಲ್ಲ ಕುಡಿಯಾದು!

ರತ್ನ—ಇದೇನಾ ಅಮ್ರುತ! [ಮಳ್ಳಿ ರುಚಿ ನೋಡಿ] ಥು! ಇದ್ಕುಡಿದದೆಂಗ್ಬದಿ ಕೀರಯ್ಯ ನೀವು! ಅಲ್ಲ—ಈ ಆರುಕಾಸಿನ್ಸಿ ಸಕ್ರೆ ಪಾನ್ಕಕ್ಕೆ ನೀವೂನೆ ಆ ರಾಕ್ಸಸ್ರೂ ಮಾರಾಮಾರಿ ಮಾಡ್ಕೊಂಬುಟ್ಟೆ ಇಸ್ನೂಗ್ಸೀರೆ ಉಡೀಸ್ಬುಡಾದ! ಆ!....ಬಲೆ ಐನಾತಿ ಇಸಂಗೋಳೈಯ ನೀವು!

ಯಮ—ಬಲ! ಇಸ್ನೂಗ್ಸೀರೆ ಉಡೀಸಿದ್ದ! ಅದೊಂದೊಸಿ ಅಂಗೆ ಆಡ್ಬುಡು ರತ್ನ!

ರತ್ನ—ಐ! ಅದೆಂಗಾಡ್ಲಿ ಯಮಣ್ಣ! ತುಟಿ ಒದ್ದೆ ಮಾಡ್ಕೊಳ್ಳಾಂವ ಅಂದ್ರೆ ಒಂತ್ತೊಟ್ಟೆಂಡ ಇಲ್ಲ! ಯೋಳದ್ದನ್ಸರಕೊಳ್ಳಾಕೆ ಜೇವಾರ್ಸಿ ಇಲ್ಲ! ಅದೆಂಗಾಡ್ಲಿ ಯೋಳು. ಐ! ಎಳ್ಡು ಕೈನಾಗ್ತಲೆ ಪರಚ್ಕೊಂಬುಡ್ಲ ಅನ್ನೋ ವಂಗಸಂಯ ಅನ್ನೀಸ್ತದೆ! ಥು!

ಯಮ—ಓಗ್ಲಿ ಬುಡು ರತ್ನ! ಆ ಬ್ರಮ್ಮಂಗೆಂಡ ಕುಡೀಸಿದ್ದನ್ನಾರ ಆಡ್ಬುಡು ಓಗ್ಲಿ—ನೆಪ್ಪಿದ್ದಂಗೆ.

ರತ್ನ—ಆ....ಅದು ಮೊದಲೆಂಗೋಯ್ತದೆ ಯೋಳು....

ಯಮ—ಅದೇನೋ ಬ್ರಮ್ಮಂಗೆ ಕೈಮುಗೀತೀನಿ ಅಂತ—

ರತ್ನ—ಆ! ಅದ್ದು!

ಬ್ರಮ್ಮ ನಿನ್ಗೆ ಜೋಡಿಸ್ತೀನಿ
ಯೆಂಡ ಮುಟ್ಟದ್ ಕೈನ!

....ಆ! ಯಮಣ್ಣ! ನಾನೀಟೊಂದು ಪದಗೋಳಾಡಿದ್ರೂನೆ ಅದೇನೀ ಪದದ ಮೇಲೇ ನಿಂಗೀಪಾಟಿ ಕಾಯಿಪ್ಸು?

ಯಮ—ನೋಡು ರತ್ನ! ಈ ಬ್ರಮ್ಮ ಇಸ್ನು ಇವರೆಲ್ಲ ನಂ ಮೇಲಿರೋರು ಅಂತೆಸ್ರು. ಈ ಮೇಲಿರೋರು ಕಡಿಪಾಕೋ ಕೆಲಸ ನಮಗ್ಗೊತ್ತಿಲ್ವ—ಒಬ್ಬೊಬ್ರೇನೆ ಕುಂತ್ಕೊಂಡಿ ಗೊರಕೆ ಒಡಿಯಾದು. ಕಾಸ್ಗೀಸು ಬರೋವಾಗ ಕಣ್ಬಿಡಾದು. ತಿರ್ಗೂನೆ ಕಣ್ಮುಚ್ಕೊಂಡಿ ಗೊರಕೆ ಒಡಿಯಾದು. ಇವರ್ಗೆಲ್ಲ ನಾವೇನಾರ ಬೋದ್ರೆ—ನಂ ಕೆಲಸಕ್ಕೋತ—ಕೈಗೊಂದ್ಚಿಪ್ರು—ತಿರಪೇಗೋಗಾಕೆ. ಇನ್ನಾ ನಿಮ್ಮಂತೋರ್ಬೋದ್ರೆ—ನಿಮಗೇನ್ಲಂಗಿಲ್ಲ ಲಗಾಮಿಲ್ಲ—ಕುಸಿಬಂದಂಗ್ಕುಯ್ತಿರಬೌದು ಕತ್ನ! ಕೇಳೋರ್ಯ್ಯಾರ ನಿಮ್ನ! 'ಅಂದ್ರಂ ಕೊಂಡೋಯ್ತದೆ ಓಗೊ! ಗುಬ್ಬೀಮೇಲ್‌ಬ್ರಮ್ಮಾಸ್ತ್ರಾನ!' ಅಂತಂತಾರೆ ಅನ್ನಿಸ್ಕೊಂಡೋರು. ಅದಕೇನೆ, ನೀವ್ಬಾಯಿ ಬಿಟ್ಕೊಂಡಂತಿದ್ರೆ ನಾವ್ಬಾಯಿ ಮುಚ್ಕೊಂಡ್ಕೇಳಾದು—ನಾವನ್ದೆ ಓದ್ರೂನೆ ನವ್ಮೇನೊಬ್ಬ ಅಂದ ಅನ್ಯಾಳಾದು. ಏನೋ ನಮ್ಗೂ ಒಸಿ ಸಮಾದಾನ....ಆ ಯೋಳು ಮತ್ತೆ ಬೇಗ....

ರತ್ನ—ಓ ಅಂಗಾ! ಕೇಳು!

ಬ್ರಮ್ಮ ನಿನ್ಗೆ ಜೋಡಿಸ್ತೀನಿ
ಯೆಂಡ ಮುಟ್ಟಿದ್ಕೈನ!
ಬೂಮಿಯುದ್ಕು ಬೊಗ್ಗಿಸ್ತೀನಿ
ಯೆಂಡ ತುಂಬ್ಕೊಂಡ್ಮೈನ! ॥೧॥
ಬುರ್ಬುರ್ಗ್ಕೊರೆ ಬಸಿಯೋವಂತ
ಒಳ್ಳೆ ವುಳಿ ಯೆಂಡ
ಕೊಡ್ತೀನ್ನನ್ದು ಪ್ರಾರ್ತ್ನೆ ಕೇಳು
ಸರಸೊತಮ್ಮನ್ಗಂಡ! ॥೨॥
ಸರಸೊತಮ್ಮ ಮುನಸ್ಕೊಂಡಾಳೆ
ನೀನಾರೊಸ್ಸಿ ಯೋಳು!
ಕುಡದ್ಬುಟ್ಟಾಡ್ದೆ ತೋಲ್ತದಣ್ಣ
ನಾಲ್ಗೆ! ಬಲೇ ಗೋಳು! ॥೩॥
ಅಕ್ಸ್ರನೆಲ್ಲ ಸರಸೊತಮ್ಮ
ಪಟ್ಟಾಗಿಡಕೊಂಬುಟ್ಟೆ

ಮುನ್ಯ ಯೆಂಡ ಬುಡೋವಂಗೇನೆ
ಬುಡ್ತಾಳ್ಗೊಳ್ಳ್ಳೆ ಗಟ್ಟೆ ! ॥೪॥
ಮುನ್ಯನ್ನಾರ ಕಾಸೋಗ್ತೈತೆ
ಯೆಚ್ಗೆ ಯೆಂಡ ಬುಟ್ರೆ !
ಸರಸೊತಮ್ಮನ್ಗೇನೋಗ್ತೈತೆ
ಮಾತ್ಸಲೀಸಾಗ್ಕೊಟ್ರೆ ? ॥೫॥
ನನ್ಗೆ ನೀನು ಲಾಯ್ರಿಯಾಗಿ
ನನ್ಕೇಸ್ಗೆದ್ಗಿದ್ಕೊಟ್ರೆ—
ಮಾಡ್ತೀನಣ್ಣ ನಿನ್ಕೊಟ್ಟೇನ
ವುಳೀ ಯೆಂಡಕ್ಕೊಟ್ರೆ ! ॥೬॥
ಕಮಲದ್ದೂವಿನ್ಕುರ್ಚಿ ಮ್ಯಾಗೆ
ಜೋಕಾಕ್ಕುಂತ್ಕೊ ನೀನು !
ನಾಕೂ ಬಾಯ್ಗೂ ನಾಕು ಬುಂಡೆ
ಯೆಂಡ ತತ್ತೀನ್ನಾನು ! ॥೭॥
ಸರಸೊತಮ್ಮಂಗೇಳಾಕಿಲ್ಲ—
ನೀನೇನೆದಕೋರ್ಬೇಡ !
ಕೇಳಿದ್ರವರಾನ್ಕೊಂದಿಸ್ಕೊಟ್ರೆ—
ತಕ್ಕೊ ಯೆಂಡದ್ಗೇಡ ! ॥೮॥

[ಯಮ ಉದ್ದಕ್ಕೂನೆ ಪುಸ್ತ್ಕ ನೋಡ್ಕೊಂಡ್ಕಲತ್ಕೋಂತಿರತಾನೆ.]

**ಯಮ**—ಬಲ ! ಈಗ್ಲೀಗ ನಾನೇ ಓದ್ಕೋಂತೀನಿ........ [ಅಂತ ಓದ್ತಾನೆ.] ಬ್ರ....ಮ್ಮ....ನಿ....ನ್ಗೆ.... ಜೋ.... ಡೀ.... ಸ್ತೀ.... ನಿ....

**ರತ್ನ**—ಯಮಣ್ಣ ! ನನ್ಮಾತಾಯ್ತು. ಇನ್ನಿನ್ಮಾತು. ನನ್ಕೇಸಿತ್ಯರ್ತ ಮಾಡು.

**ಯಮ**—ಓ ! ತಕ್ಕೊ ! ಏ ! ಚಿತ್ತ್ರಗುರ್ತ್ತ ! ತಗಿ, ಕಡತ ಬಿಚ್ಕೊ !.... ಏನದು ನಿನ್ಪಿರ್ಯಾದಿ ರತ್ನ ? ಯೋಳು !

**ರತ್ನ**—ನೋಡು ಯಮಣ್ಣ ! ನನ್ನ ಸರಕಕ್ತ್ರಂದಿದ್ದು ನಿಮಗ್ನ್ಯಾಯ ಅಲ್ಲ ಯಮಣ್ಣ ! ನ್ಯಾಯ ಅಲ್ಲ ಯಮಣ್ಣ ! ಇದು ದರ್ಮ ಅಲ್ಲ !....

ಯಮ—ಒಸಿ ತಡಿ ರತ್ನ ! ನೀ ದರ್ಮ ಅಲ್ಲ ಅಂದಾಕ್ಸೆನ್ನ ಅಲ್ಡೆ ಓಯ್ತದ ! ಇಚಾರ್ಸಾಂವ, ದರ್ಮ ಔದ ಅಲ್ವ ನೋಡಾಂವ. ನಮಗೆ ಸೇಂಯಿತ್ರು ಸತ್ರುಗಳು ಎಲ್ಲಾ ಒಂದೇನೆ. ಇಚಾರ್ಸಾಂವ. ಎಲ್ಲಿ—ಮೊ ದ ಲಿಂ ದ ಕೇಳಾಂವ. ನೀಯಾಕ್ಬಂದೆ ನರಕಕ್ಕೆ ?

ರತ್ನ—ಐ ! ನಾ ಬಂದ್ನ ನರಕಕ್ಕೆ—ಇಲ್ಲೆಂಡ ಸುರದೋಯ್ತಿತ್ತಂತ ! ಒಲ್ಲೆ ಒಲ್ಲೇಂತೊಡಕೋಂತಿದ್ರೂನೆ ಕೈಕಾಲ್ಬಿಕ್ಕೊಂಡೆಳಕೊಂಬಂದವ್ರೆ ನಿನ್ಜವಾನ್ರು ! ತಿರ್ಗೂನೆ ನನ್ಗೇನೆ ದಬಾಯಿಸಾದ—ಯಾಕ್ಬಂದೇಂತ ! ಯೆಂಡ ಒಂದ್ಬುಟ್ಬುಟ್ಟು ಇನ್ನೇನ್ಕೊಟ್ಟದ್ರೂನೆ ನಂ ಪ ಡ ಕಾ ನೆ ಬುಟ್ಬರ್ತಿದ್ನ ನಾನು !

ಯಮ—ಅದಲ್ಲ ರತ್ನ ನಾ ಕೇಳಿದ್ದು ! ನರಕಕ್ಬರಬೇಕಾದ್ರೆ ಸಾಯುಬೇಕು. ನೀನದ್ಯಾಕ್ಸತ್ತೆ ಅಂತ ನಾ ಕೇಳಿದ್ದು !

ರತ್ನ—ನಾನದ್ಯಾಕ್ಸತ್ತೇಂತ್ಲ ? ಗಲ್ಗಾಕ್ನಿಲ್ವ ನನ್ನ !

ಯಮ—ಅದ್ಯಾಕ್ಗಲ್ಗಾಕಿದ್ರು ನಿನ್ನ ?

ರತ್ನ—ಯಾಕೇಂತಂದ್ರೆ ? ಒಂದ್ದುಡ್ಡಿನ್ಡಬ್ಬಿ ಸಾಯ್ಸಿಲ್ವ ?

ಯಮ—ದುಡ್ಡಿನ್ಡಬ್ಬಿ ! ಏನದು ದುಡ್ಡಿನ್ಡಬ್ಬಿ ?.... ನೋಡು ರತ್ನ ! ಯೋಳೋದ್ನ ಸರೀಗೇಳ್ಬಾರ್ದ ! ಇಲೀ ತೋರ್ಸೂಂತಂದ್ರೆ ಬಾಲಾನ ಮೊದಲು ತೋರ್ಸೋದು ?

ರತ್ನ—ಬಲ ! ನೀನೇ ಯೋಳ್ಕೊಡಬೇಕಲ್ವ ನಂಗ್ಮಾತಾಡಾಕೆ! ಅಲ್ಲ, ಬಾಲ ದ್ಸುದ್ದಿ ಎತ್ತಿದ್ದೋನು ನೀನಾ ? ನಾನಾ ? ಕೇಳೋದ್ಕೇಳ್ಬಿಟ್ಟು ಈಗ್ನಂಗೇ ದಬಾಯಿಸಾದ !.... ನಿಮ್ತಪ್ಪಲ್ಲ ಯಮಣ್ಣ ಅದು – ನಿಮ್ಮದಿಕಾರದ್ತಪ್ಪು !

ಯಮ—ನೋಡು, ರತ್ನ, ತಪ್ತಿಳಕೋಂತೀಯಲ್ಲ. ನಿಂಗೆಂಗ್ಬುಸಿ ಬತ್ತದೆ ಅಂಗೇಳ್ಬುಡು. ಕೇಳ್ಬುಟ್ಟು ತೀರ್ಮಾನ ಮಾಡ್ತೀನಿ. ಆದ್ರೆ ನೋಡು.... ನೀ.... ನೀ.... ನೀನ್ನಂಗಾ ಯೋಳಾದು ಅನ್ಬೇಡ.... ನಿಂಗೇ ಗೊತ್ತದೆ ಅದು.... ಅದೇ, ನೀನೇ ಆಡಿದ್ಬೀಯಲ್ಲ....'ಯೇಳೋದ್ನೆಸ್ತೊ ಅಸ್ಟುಲ್ಲೇಳಿ ಮನೆಗೋ ಗೋನ್ಸ್ಗೆ ಮೇಸೆ' ಅಂತ.... ಅದ್ಬಂಗೆ....

ರತ್ನ—ಗೊತ್ತಾಯ್ತಾ ಶ್ರಾಯೆ ; ಜಟ್ಪಟ್ನೇಳಿ ಮುಗೀಸ್ಬಾರ್ದ ಕ ತೇ ನ. ನನಗೂನೆ ಒತ್ತಾಯ್ತು ಬಂತು. ಯೆಂಡಕ್ಕೂಡ ಗತಿ ಇಲ್ಲ ಇಲ್ಲಿ. ಸುಂಕೆ ತಳಾರ ಮಾಡ್ತೌನೆ....

**ಯೆಮ**—ನಾ ಮಾತಾಡಾಕಿಲ್ಲ. ನೀ ಯೋಳ್ಬುಡಣ್ಣ.

ರತ್ನ—ನೋಡು ಯಮಣ್ಣ ! ನಾವ್ಜೀತಾ ಮಾಡಾರು. ಅಂದ್ರೆ ಆವಾಕ್ಕೆಲಸ ಮಾಡಾದು. ಆಗ್ಬಂದ್ಸುಡಿಕಾಸ್ನಲ್ಲಿ ಆಗ್ಲೆ ಉಣ್ಣಾದು. ಜೀತ ಮಾಡ್ದ್ರೆ ಕಾಸು. ಕಾಸ್ಬಂದ್ರೆ ಯಿಟ್ಟು. ಯಿಂಗಾಗ್ಬುಟ್ಟು, ಬೆಳಗಾದ್ರೆ ಸಂಜಾದ್ರೆ ಅದೇ ಯೋಚ್ನೆ—ನಾಳೆ ಯಿಟ್ಗೆ ಕೆಲಸ ಯೆಲ್ಲುಡಕಾನೆ ಅಂತ.

**ಯೆಮ**—ಅಂದ್ರೆ ಸಲೀಸಾಗ್ಮಾಡಾಕೆ ಕೆಲಸಾನೆ ಇಲ್ವಾ ನಿಮ್ಗೆ ?

ರತ್ನ—ಇರೋ ಜನಕ್ಸಾಲೋ ಅಸ್ಟು ಕೆಲಸ ಇಲ್ವಂತೆ ಯಮಣ್ಣ.

**ಯೆಮ**—ಐ ! ಮಾಡಾಕ್ಕೆಲಸ ಇಲ್ಲಾಂದ್ರೇನಾ ಅರ್ತ ?

ರತ್ನ—ಮಾಡಾಕ್ಕೆಲ್ಸ ಇಲ್ಲಾಂತಲ್ಲ ಯಮಣ್ಣ, ಮಾಡೀಸ್ದ ಕೆಲ್ಸಕ್ಕೊಡಾಕೆ ಕಾಸಿಲ್ಲಾಂತ.

**ಯೆಮ**—ಐ! ಕಾಸಿಲ್ಲಾಂತಂದ್ರೇನಾ ವುಡಗಾಟ! ದಿನಾ ಬೆಳಗಾದ್ರೆ ಸಂಜಾದ್ರೆ ಒಡಕೋಂತಿರತಾನಾ ಕುಬೇರ—ಈ ಬೂಮೀಗಣ ಸುರ್ದು ಸುರ್ದು ಸುರ್ದು ನನ್ಕಜಾನೇನೆಲ್ಲ ಕಾಲಿ ಆಗೋಯ್ತೂಂತ !

ರತ್ನ—ಅದ್ದಿಟ ಯಮಣ್ಣ ! ಕುಬೇರ ಬೂಮೀಗಣ ಸುರೀತಾನೆ. ಬೂಮೀಲದೆ ಮಸ್ತಾಗಣ—ಬೂಮಿಾಲೇ ಅದೆ ! ಆದ್ರೂನೆ ಗಂಜೀಗ್ಕಾಸ್ಬೇಕು ಗರೀಬಂಗೆ ಅಂದ್ರೆ—ಪಾ ಪ ರ್ !

**ಯೆಮ**—ಅಂದ್ರೆ ?

ರತ್ನ—ಅಂದ್ರೆ—ಬೂಮೀಲೊಸಿ ಇಜಾತಿ ಮ್ರುಗಗೋಳವೆ—ದುಡ್ಡಿನ್ದಬ್ಬಿ ಗೋಳಂತ ! ಔಕ್ಕೆಸ್ಟು ಕಾಸ್ಕಂಡ್ರೂ ತ್ರುಪ್ತಿ ಇಲ್ಲ. ಬಂದಸ್ಟೂ ಬರ....ನಮ ಗೆಂಡ ಕಂಡ್ರೆಂಗೆ ನೋಡು, ಕಾಸ್ಕಂಡ್ರವಕಂಗೆ! ನಾವಾರ ಯೆಂಡ ಕುಡೀತೀವಿ, ಆನಬೌಸ್ತೀವಿ. ಅವಕ್ಕನಕ ಕಾಸಿಕ್ಕಾಸ್ಕೊಡೋದ್ರಲ್ಲಾಯ್ತೆ, ಒರ್ತ್ತು, ಅನ ಬೌಸೋಕ್ಕೇಳ್ಕೊಂಬಂದಿಲ್ಲ. ಅಣ ಇದ್ರೂನೆ ರುಣ ಇದ್ದಸ್ಟೇ, ಯಮಣ್ಣ !

**ಯಮ**— ಮತ್ತೆ, ಉಣ್ಣಾಕಿಲ್ಪಿದ್ಮೇಲೆ—ಅದ್ಯಾಕಾ ಬಚ್ಚಿಟ್ಕೊಳ್ಳಾದು ?

**ರತ್ನ**—ಐ ! ಅದೊಂದ್ಬಾಳಿ, ಯಮಣ್ಣ, ಒಂದ್ಬಾಳಿ—ತಾನೂ ತಿನ್ನ, ಪರರ್ಗೂ ಕೊಡ ಅಂತ. ಔತ್ತಪ್ಪಲ್ಲ ಯಮಣ್ಣ ಅದು. ಕೊತ್ತಂಬರಿ ಮಾರೋದು ಅಣೇಲ್ಬರದಿರೋವಾಗ ಪೀತಾಂಬರದ ಸೀರೆ ಪೆಟ್ಗೇಲಿದ್ರೇನಾಯ್ತದೆ ?—ಅನುಗಾಲ ಮಳೆ ಬಂದ್ರೂನೆ ಮುತ್ತುಗಕ್ಮಾರೇ ಎಲೆ ಅಂದಂಗೆ. ಎಸ್ಬಾದ್ರೇನಂತೆ ? ಆನೆ ತಿನ್ನಾದು ಸೊಪ್ಪು, ಇರುವೆ ತಿನ್ನಾದು ಸಕ್ರೆ !

**ಯಮ**—ಚೆ ! ಚೆ ! ಚೆ ! ಚೆ ! ಇಂಗಾಗೋಗದ ಲೋಕ ! ನಾನೂ ಆಕಡೆ ಬಂದೊಸಿ ದಿನಾನೇ ಆಯ್ತು. ಈ ಕಾಲೇನಾ ಉಳುಕೊಸಿ ಕಮ್ಮಿಆಗೋಗ್ಲಿ—ಬತ್ತೀನಿ. ತರಾಟೇಗ್ತಗೋತೀನಿ ಒಬ್ಬೊಬ್ಬಂಗಾಗಿ !

**ರತ್ನ**—ಈ ಚಾಲ್ಯಾಕ್ಯಮಣ್ಣ ! ಕುಂಟನಿಗೆಂಟ್ನಿವ ಅಂದಂಗೆ ನಿಂಗ್ಕಾಲುಳಕೋಗಿದ್ರೆ ನಿನ್ನೆಮ್ಮೇಗೂ ಕಾಲುಳಕೋಗದ ?

**ಯಮ**—ನನ್ನೆಮ್ಮೆ ! ಏನಾ ಅದು ನನ್ನೆಮ್ಮೆ ?

**ರತ್ನ**—ವ್ಹಾ ! ಅದ್ದು ಏಟು ! 'ಮಳ್ಳಿ ಮಳ್ಳಿ ಕಾಲೆಷ್ಟ ಮಂಚಕ್ಕೆ ?' ಅಂದಂಗೆ. ಬೆಕ್ಕಣ್ಮುಚ್ಕೊಂಡೇ ಯೀರ್ತದಂತಯ್ಯ ಆಲ್ನ ! ಏನ್ಯಾರ್ಗ ಗೊತ್ತಿಲ್ಲಾಂತಾನಾ—ನೀ ಸವಾರಿ ಒಂಟಾಗ ಎಮ್ಮೆ ಮೇಲಲ್ವ ಓಗಾದು ?

**ಯಮ**—ಆಹಾಂ ! ಇಷ್ಟೇರೆ ಕಲತ್ಕೊಂಡದೊ ನಿಮ್ಜನ—ಯಮನ್ಗೆಮ್ಮೆ ಮೇಲ್ಕುಂಡರ್ಸೋದ್ನ ! ಈ ಕಾಲುಳಕಂಗೋಗ್ಲಿ ನೋಡು—ಬೂಮೀಗ್ಬಂದಿದ್ದೇನೆ ಕೆಲ್ಸ, ಒಬ್ಬೊಬ್ಬಂಗಾಗಿ ಸಾಲಾಗ್ನಿಲ್ಸಿ, ಸಿಪ್ಪೆ ಸುಲ್ಸಿ, ಚಮ್ಡ ಚಿರಾಯ್ಸಿ, ಎಮ್ಕೆ ಎಗರ್ಸಿ, ಸಬ್ಕೆ ಸಬ್ ಚಿಂದಿ ವೃಡಾಯಿಸ್ದೆ ಓದ್ರೆ—ನನ್ನೆಸ್ರು ಯಮಾನಾ !

**ರತ್ನ**—ಯಮಣ್ಣ ! ಈ ಪರ್ಪಂಚದಲ್ಲಿ ಎಲ್ಲಿಂದ ಎಲ್ಗೋದ್ರೂನೆ ಇಂಗೇನೋ ಅನ್ತೀನಿ ! 'ಬಡವ್ರೋರ್ಗೋಳ್ನೋಡಣ್ಣ ಇಂಗದೆ' ಅಂದ್ರೆ, 'ಓ ! ಅಂಗದಾ ! ನೋಡೋಂವ ಏನಾರ ಮಾಡಾಕಾದ್ರೆ' ಅಂದೋನು-'ನೀ ಎಮ್ಮೇಮೇಲ್ಕುಂತೀಯಂತಲ್ಲ ಯಮಣ್ಣ' ಅಂದ್ರೆ 'ಯೋಳ್ದೋನ್ನಿಡಕೊಂಡ್ಬಡದಾಕ್ಬುಟ್ಟೇನು' ಅಂತ ಸಿಡಿಸಿಡೀ ಅಂತೀಯಲ್ಲ ! ಅಸ್ಟಲ್ದೆ ಯೋಳ್ತಾರ—ತಾನುಂಟೋ ಮೂರುಲೋಕುಂಟೋ ಅಂತ !

**ಯಮ**—ಅದೆಂಗಾರ ಇರ್ಲಿ ಬುಡು ರತ್ನ! ಜೇಗ ಬೂಮೀಗ್ಬರಬೇಕು. ಯಿಂಗಾದರುದ್ಧಾರಾಗಾಕಿಲ್ಲ.

**ರತ್ನ**—ಜನ ನಿನ್ನೇನೆ ಯಿಂಗಾಡ್ಕೊಂತಿದ್ರೆ ನೀ ಒರದೆ ಓದೀಯಾ—ಬಂದೇ ಬತ್ತೀಯಾ! ಬಂದ್ಮೇಕೆ ನೀ ಮಾಡ್ಬೇಕಾದ್ದೊಂದೇ ಕೆಲಸ ಅದೆ ಬೂಮಿ ಉದ್ಧಾರಾಗಾಕೆ

**ಯಮ**—ಏನದು ?

**ರತ್ನ**—ಏನಿಲ್ಲ—'ಇರೋದ್ಕೆ ಕಾಲಿ ಕರೊ. ಇಲ್ದಿದ್ಕೆ ಬರ್ತಿ ಕರೊ'—ಇದೆ ನಿಂಗ್ಬೇಕಾದ್ಮಂತ್ರ. ಬಾಯಲ್ಲಿದನಾಡು, ಕೈಯಲ್ಲಂಗ್ಮಾಡು.

**ಯಮ**—ಅಂದ್ರೆ ?

**ರತ್ನ**—ಏನ್ಕೇಳಿದ್ಕೆಲ್ಲ 'ಅಂದ್ರೆ? ಅಂದ್ರೆ?' ಅಂತಿದ್ರೆ?....ಔದೌದು, ಮರ್ತಿದ್ದೆ....ಬೂಮೀಗಿರೊ ಅದ್ವಾನೆಲ್ಲ ನರಕಕ್ಕೆಂಗೊತ್ತಾಕ್ಬೇಕೇಳು! ಪಾಪ! ಇನ್ನೇನಿಲ್ಲ ನೋಡು....ಬಡವರು ಬಾಗ್ಯವಂತ್ರು ಇಬ್ರನ್ನೂ ಮಿಲಾಕತ್ ಮಾಡ್ಬುಟ್ಟೆ ಚೆನ್ನಾಗಿ ಕುಲಕ್ಬುಡು—ಎಳ್ಡೂ ಸಮಾನಾಗೋತನಕ...ಇದಿಷ್ಟ್ನೇನ್ಮಾಡ್ಬುಟ್ರೆ—ನೀ ವುಟ್ಟಿದ್ದಾರ್ತಕ ಅಂದಂಗೆ....ಆದ್ರೆ ನೋಡು, ನೀ ನಂಬೂಮೀಗ್ನೋಡಾಕ್ಬಂದ್ರೆ, ನಂ ದೊರೆಗಳು ದೊಡ್ಮನಸ್ರು ಬಂದಂಗ್ಬಂದೋಗ್ಬೇಡ. ದೊಡ್ಡೋರಂಗ್ಡೀನೂವೆ ನೋಡು. ಔರ್ತ್ವಟಕ್ಕೋಗು. ಊವಾಕಿತ್ಕೊ, ಸಿಕ್ಕಿಸ್ಕೊ. ಆದ್ರೆ ಗರೀಬರ ಜೋಪ್ಡಿ ಮರೀಬೇಡ. ಅಂಗೇನೆ ಅವರ್ಮುರಕಲಟ್ಟೆ ಕಡೇನೂ ಒಸಿ ಸುಳದೋಗು. ಆ ಜೋಪ್ಡಿ ಯೋಳ್ಕೊಡತದೆ ನಿನ್ಗೆ ಲೋಕಾನುದ್ಧಾರ ಮಾಡಾದ್ನ!

**ಯಮ**—ಏನೋ ನಾನಿಂದೆ ಕಂಡಂಗಿಲ್ಲಾಂತ ಕಾಣ್ತದೆ ಬೂಮಿ ಈಗ! ನಾ ಬರೋವಾಗ ಮೊದೂಲು ನಿನ್ಪಡಕಾನೆ ತಾವ್ಬತ್ತೀನಿ, ರತ್ನ. ನೀ ಕರಕೊಂಡೋಗಿ ತೋರಿಸ್ಬುಡು ಎಲ್ಲಾನೂ. ಆಮೇಲ್ನೋಡೋಂವ ಮಾಡೋ ಕೆಲಸಾನ!....ಆಯ್ತು! ನೀನ್ಯಾಕ್ರೆ ಮುಡೀಕ್ಕಂಡೋಯ್ತಾನಿದ್ದೆ—ಆಮೇಕೆ?

**ರತ್ನ**—ಅಂಗೇ ಮುಡೀಕ್ಕಂಡೋಯ್ತಾನಿದ್ದೆ. ಮುಡೀಕ್ಕಂಡೋದಾಕ್ಸ್ನೇನೆ ಜೀತಾ ಸಿಕ್ಬುಡೋವಂಗಿದ್ರೆ ಅದ್ಯಾಕುಡೀಕ್ಕಂಡೋಗ್ಬೇಕೆಮಣ್ಣ?.... ...ಆವೊತ್ತಿಲ್ಲಾ ನೋಡು, ಸಂಜೆಗಂಟ ಮುಡೀಕ್ಕೊಂಡಲ್ದು ಸತ್ತು ಸುಣ್ಣಾದ್ರೂನೆ ಕೆಲ್ಸ

ಸಿಕ್ಕಿದ್ರೆ ಔರಪ್ರಾಣೆ ! ಕೊನೇಗಂಗೇ ಅಲ್ಕೊಂಡು—ಸಂಜೆ ಯೆಂಡ ಕುಡಿಯೋ ವೊತ್ತು—ಕಾಸಿರ್ನಿಲ್ಲ ಕೈಲಿ—ಅಂಗೇ ಒಂದ್ಬಂಗ್ಲೇ ತಾಕ್ಬಂದೆ. ಬಂದಿದ್ದೇನೆ ಆ ಸಾಯೇಬನ್ಗೆ ಸಲಾವಾಕ್ದೆ....

**ಯುಮ**—ಸಾಯೇಬ ! ಔನೇನ ನಿನ್ದುಡ್ಡಿನ್ಡಬ್ಬಿ ?

**ರತ್ನ**—ಔದೌನೇನೆ !

**ಯುಮ**—ಮತ್ತೆ ಔನ್ಗ್ಯಾಕ್ಸಲಃವಾಕಿದ್ನೀನು ? ಮೂ ರೊ ತ್ತೂ ನೆ ಔನ್ನನ್ನಿರ್ತೀಯ !

**ರತ್ನ**—ಇನ್ನೇನ್ಮಾಡಾನೆ ಯುಮಣ್ಣ ! ನಾನೊಬ್ನೆ ಆಗಿದ್ರೆ, 'ನೀನಿಲ್ದಿದ್ರೆ ನಿಮ್ಮಪ್ಪಾನೆ ಕಣೊ' ಅಂದ್ಬುಡ್ತಿದ್ದೆ. ಆದ್ರೂನೆ ನನ್ನಂಜಿ....ನನ್ನೆಡ್ತಿ ಯುಮಣ್ಣ....ಏ ಯುಮಣ್ಣ ! ಬಲೆ ಲೇಟಾಗೋಯ್ತು. ನಂಜಿ ಅದೆಸ್ಟೊಡ ಕೋಂತಿರ್ತಾಳೊ! ನಾ ಓಯ್ತೀನೆಮಣ್ಣ....[ಓಡೋಗೋಕೋಯ್ತಾನೆ.]

**ಯುಮ**—ತಡಿ ! ತಡಿ ! ಕೇಸಿತ್ಯರ್ತ ಆಗ್ದೆ ಅದೆಂಗೋಯ್ತೀಯ ! ಜಟ್ಪಟ್ನೆ ಯೋಳ್ಮುಗೀಸು ಮತ್ತೆ !

**ರತ್ನ**—ಆ!....ನೋಡ್ದ !....ನಾನೊಸಿ ಗರವ್ಮಾಗ್ಬುಟ್ರೆ, ಬಾಯಿಗ್ಮಣ್ಬಿದ್ರೂ ಬೀಳ್ಳಣ್ಣ ಅಂತಂದ್ರೆ—ನಂಜಿ ಪಾಡಿಚಾರಿಸಬೇಡ್ವ ? ನಾನೇನನಬೌಸಿದ್ರೂನೆ, ಯುಮಣ್ಣ, ನಂಜೀಗ್ಮಾತ್ರ ಸುಕಾಗಿಕ್ಬೇಕಂತ !....ಆದ್ರೂನೆ, ನೋಡು, ನಮ್ಗೆಲ ರತ್ತೋಗಾಕಿಲ್ಲ. ಇತ್ತಾಗೊಡ್ಗ್ಸಲಾವಾಕೋಂವ, ಅತ್ತಾಗ್ಬತ್ತಿ ಕೊಡಾಂವ—ಕೊಂಕಳ್ನಲ್ದೊಣ್ಣೆ ಕೈಯಲ್ಪರಣಾರ್ತಿ ಅಂದಂಗೆ. ಎಡಗೈನಾಗ್ಬೆನ್ಸವರ್ತಿದ್ದಂಗೇನೆ ಬಲಗೈನಾಗಿಕ್ಬೇಕ್ನೋಡು ಪಟಾಪಟ್ಟಂತೆ—ಸಾವಿರ ಸೀಳಾಗೋಗ್ಬೇಡ್ವೆ ಬುಳ್ಡಿ ! ನೋಡು, ಯುಮಣ್ಣ, ಸಾಚಾ ಆಗಿರಬಾರ್ದು ಮನಸ ಲೋಕದಲ್ಲಿ. ಅಂಗೇನ್ರೆ ಇತ್ತಂದ್ರೆ ಔನ್ಗೆ ಮಸಾಣಾನೆ ಮನೆ !........................

ಔರಣ ಮಾಡ್ಲಿ, ಯುಮಣ್ಣ ಅನಬೌಸ್ಲಿ, ನಂಗೇನೊಟ್ಟಿಕಿಚ್ಚಿಲ್ಲ. ಆದ್ರೆ ನಿನ್ಸಾಲಕ್ಕೆ ನನ್ನಲಸಿನಣ್ಣ ಆಕಾದು? ನಾವೇನೆಚ್ಗೆ ಕೇಳಾಕಿಲ್ಲ—ಅಂಗೀಗ್ಬೇಡ ನಮ್ಗೆ. ನುಂಗಾಕ್ಕೂ ಬೇಡ ಅಂತೀಯ! ಏನೋ ಮೆತ್ತಗೆವ್ರೆ, ಮಾತಾಡಾಕಿಲ್ಲ ಅಂದ್ಬುಟ್ಟೆ, ಸಿಕ್ದಂಗೆಲ್ಲ ಮುಕ್ಕ್ಯಾದ ನಮ್ನ! ಕಬ್ಸೀಯದೆ ಅಂದ್ಬುಟ್ಟೆ ಬುಡಾನೂನೆ ತಿಂತಾರಾ ಜನ !....ದಿನಾದಿನಾ ಸನಿ ಕಾಡಿದ್ರೆ ನಾವ್ಯಾವತ್ತು ಯುಮಣ್ಣ ಸೆಟ್ಗೆ

ರಾದು ? ಬಾಯಲ್ಮಾತ್ರ ದೊಡ್ಡಾಗೇಳ್ತಾರೆ : 'ನಾವೂ ನೀವೂ ಅಣ್ತಂದೀರು,
ಒಂದೇತಾಯಿ ಮಕ್ಕಳು'........ಔದೌದಣ್ಣ....... ನನ್ಗೂ ನಿನ್ಗೂ ಪ್ರಾಣ,
ಮೀನ್ಸ್ಕಕ್ಕೇಲ್ಮಾತ್ರ ಕೈಯಾಕ್ಬೇಡ ಅಂದಂಗೆ.......ಔರೀಗಿನ್ನಾ ಗೊತ್ತಿಲ್ಲ,
ಯಮಣ್ಣ, ಬಂಡೀಗೊಂದ್ಚಕ್ರ ಸಾಲ್ದೂಂತ....ಕೊಡಲಿ ಉಕ್ನಲ್ಮಾಡ್ತಾರೆ—
ಅದ್ರೂನೆ ಮರದ ಕಾವಿಲ್ದೆ ಕಡಿದಾಂತ ಸೌದೇನ ?.... ನಾವೂನೆ ಕಣ್ಮುಚ್ಕೊಂ
ಡ್ಬುಡೀತಿರ್ತೀವಿ—ಯಾಕೆ ? ಕೊಟ್ಣ ಕುಟ್ಟ ಮಿಂಡನ್ಸಾಕಾಕೆ ! ನಮ್ಮವ
ರ್ಗೇನಾರ ಯೋಳಿದ್ರುರ್ತಾಯ್ತದಂತೀಯ—ರೂಡೀಲಿಲ್ಲದ ಪದ ಆ ಡಿ ದ್ರೆ
ಗೊತ್ತಾಯ್ತದ ಯೋಳು....ಅ ರಿ ಯೊ ೯ ತ ನ ಕ ಎಳೀಬಾರ್ದು ಯಮಣ್ಣ,
ಮುರಿಯೋತನಕ ಬೊಗ್ಗೀಸ್ಬಾರ್ದು ! ಬಡವ್ರೋರಂದ್ರೆ ಏನೋ ಅಂತ ತಿಳಕೊಂ
ಬುಟ್ಟಾರೆ! ಉಪ್ಪಿಲ್ದೆ ಓದಾಗ ಉಡಾಯ್ಸಾದೆ ಉಪಾಯ ಅಂತೌರೆ ಉಪಾದ್ರು...
ಕುಂತಾಗ್ಕೊತ್ತಿ, ಯಮಣ್ಣ, ಬಡವ್ರೊರು! ಆರ್ದಾಗುಲಿ ! ನಾನುಲಿ ಅಂತಂದ್ರೆ
ನನ್ನಣ್ಣದೀರೆಬ್ಬುಲಿ ! ಕೆದಕಬಾರ್ದು ಯಮಣ್ಣ ನಮ್ನ ! ಉಳ ಕೆದಕೋ
ಕೋದ್ರೆ ಆವ್ರೋಳ್ತದೆ ! ಅಸಲಿಗಡ್ಡಿ ಮಾಡ್ದಷ್ಟು ಬಡ್ಡಿ ಏರ್ತದೆ ಅಂತ
ಯೋಳ್ಕೊಡತಾರೆ ಸೆಟ್ರು, ಕೇಳ್ಲಿ !....ಔರಿಗಿನ್ನಾ ಗೊತ್ತಿಲ್ಲ ಯಮಣ್ಣ—ಬಿಸಿ
ಆರಿಸಬೇಕು, ಅಸಿ ಕಾಯಿಸಬೇಕು ಅಂತ !....ದೊಡ್ಡೋರಂತೆ ! ಚಿಕ್ಕೋ
ರಂತೆ ! ಯಣಮುಂಡೀಗಂಡರ್ತಂದು ! ಅಗಲ ಆದಷ್ಟು ಅರಿಯಾದ್ಸಲಬ !
ಉದ್ದಾ ಆದಷ್ಟು ಮುರಿಯಾದ್ಸಲಬ !....ಒಂದ್ದೊಡ್ಬಂಡೆ ಆದೆ ಯಮಣ್ಣ—
ಸಾವಿರ ಜನ ಗಡಾರಿ ಆಕಿ ಮೀಟಿದ್ರೂನೆ ಒಂಡಿಂಕ್ರ ಅಲಗೊಲ್ದು—ಒಂದ್ಮರ
ಒಂದ್ಸಣ್ಣೀರಂಗ್ಬುಡ್ತು ಅನ್ನು—ಫಳೀರಂದೋಯ್ತು ಬಂಡೆ !....ಸು ೦ ಕೆ
ಇದೆಲ್ಲಾ ಉಡಾಪೆ ಅನ್ಕೊಬೇಡಣ್ಣ. ಒಂದ್ದಿವ್ಸ ಅಲ್ಲ ಒಂದ್ದಿವ್ಸ ಬೇರ್ಬುಟ್ಟೀ
ಬುತ್ತದೆ. ಓದ್ರೊಂದ್ಕಲ್ಲು, ಬಂದ್ರೊಂದಣ್ಣು !—ಬೆಂಕೀಗೇ ಎದರ್ನಿಲ್ವಂತೆ,
ಬೂದೀಗೆದರ್ತೀವಾ ನಾವು ?—ನಾವಿಂಗಿಲ್ಲ ಅಂತಿದ್ರೆ—ಸುಲೀಸ್ಕೊಬೌದಣ್ಣ,
ಸುದ್ದಿಮಾತ್ರ ಯೋಳ್ಬಾರ್ದು !—ನಮಿಗ್ಸಾಪ ಆಕ್ತಿರ್ತಾರೌದು. ನಮಿಗ್ಸಾಪಾ
ಆಕಿ ಔರುದ್ದಾರಾದಾರಾ—ಸವತೀನ್ಮುಂಡೆ ಅಂದಂಗೆ ! ಇಸ್ಟಕ್ಕೂನೆ ನಾಮಿಂ
ಗಾದ್ರೆ ಯಾರ್ತಪ್ಪು ಯಮಣ್ಣ? ಅತ್ತೆ ಕಲೀಸಿದ್ಕೆಲಸ, ಗಂಡ ಕಲೀಸಿದ್ದಾದರೆ...

ನೋಡು ಈ ಸುದ್ದಿ ಎತ್ತಿದ್ರೆ, ನನ್ಗೆ ಮನೆ ಮಟ ಎಲ್ಲಾ ಮರ್ತೋ
ಯ್ತದೆ........ಆಮೇಕ್ನೋಡು, ಆ ಸಾಯೇಬನ್ಗೆ ಸಲಾಮಾಕ್ಬುಟ್ಟ 'ಏನಾರ

ಚಿಕ್ಕಾಕ್ರಿ' ಅಂದೆ. ನೋಡು ಯಮಣ್ಣ, ಕೇಳಿದ್ರೆ ತಕ್ಕೊ ಅನ್ಬೇಕು, ಇಲ್ಲಾ ಇಲ್ಲಾಂತನ್ಬೇಕು. ಅದು ಸಲೀಸು. ಅದು ಬುಟ್ಬುಟ್ಟೆ, ಅಲ್ಕಾ ಮಾತಾ ಅನ್ನಾದು, ಯಮಣ್ಣ? ದೊಡ್ಡ ಸಾಯೇಬ ಆದಾಕ್ಸ್ನ, ಗರೀಬ ಗೋಗರದಾಂದ್ರೆ ಅಲ್ಕ ಮಾತಾ ಅನ್ನಾದು? ಅದ್ನ್ಯಾಯಾನ ಯಮಣ್ಣ? ದರ್ಮಾನ? ನೀನೇ ಯೋಳು....

**ಯಮ**—ಸುಂಕೆ ಅಲ್ಕ ಮಾತಂತ ಅಂಗೆಲ್ಲ ಮೊಗಂ ಆಗಂದ್ರೆ ನಡೀತದ ರತ್ನ? ಅದೇನಂದ ಬಿಡೀಸೇಳು.

**ರತ್ನ**—ಚೆ! ಚೆ! ಚೆ! ಚೆ! ಎಲ್ಲಾರುಂಟ! ನಾವು **ಪಡಕಾನೆಯೋರು** ನಂಬಾಯ್ನಾಗಂತ ಮಾತ್ಬರಾಕಿಲ್ಲ!

**ಯಮ**—ಏ ಚಿತ್ರಗುಪ್ತ! ಎಲ್ಲಾ, ಆ ಸಾಯೇಬ ಅದೇನಂದ ನೋಡು, ಕಿತಾಬ್ಬಿಚ್ಚು.

**ಚಿತ್ರಗುಪ್ತ**—[ಕಿತಾಬ್ಬಿಚ್ನೋಡಿ] ಮಾಸೋಮಿ-[ಅಂತ ಮುಂದಕ್ಕದನ್ನೀಡ್ತಾನೆ.]

**ಯಮ**—[ಆ ಬೋಗಳಾನ್ನೋಡಿ] ಅ ಬ್ಬ ಬ್ಬ! ಇಂತಾ ಮಾತೂನೆ ಅದಾ ಬೂಲೋಕದಾಗೆ! ಬಲೆ ಚೆಂದಾಗದೆ—ಏನೋ ಅಂತಿದ್ದಿ!

**ರತ್ನ**—ನಾನೇಳ್ಲಿಲ್ವ ಮೊದ್ಲೇನೆ. ನಮ್ಮಾತಂದ್ರೆ ನಿಮಗೆಲ್ಲದಣ್ಣ ಸಡ್ಡೆ!

**ಯಮ**—ಆ ಮೂಗ್ನಂಬಿಕೇನೆಲ್ಲ ಇಲ್ನಡಿಯಾಕಿಲ್ಲ, ರತ್ನ! ನಮ್ಮೋರು ನಿಮ್ಮೋರು ಎಲ್ಲಾ ಬೂಲೋಕದಲ್ಲಿ! ನರಕದಲ್ನಡಿಯಾಕಿಲ್ಲ ಅದು! ಮುಂದಕ್ಕೇಳು.

**ರತ್ನ**—ಮುಂದೆ....ಅವನಂಗನ್ನೋತ್ಲಾನೆ, "ಐಯ ಗ್ರಾಸ್ತ! ನಿನ್ನಲ್ಕ ಮಾತೂ ಬೇಡ, ನಿಸ್ಕಾಕ್ರೀನೂ ಬೇಡ. ಸಲಾಂ ತಕ್ಕೊ" ಅಂದ್ಬುಟ್ಟ ನೆಟ್ಟ ಗ್ಗೇಟ್ರಾತ್ವಂದೆ. ನನ್ನಸ್ಟಕ್ನಾನಂಗ್ಬಂದ್ರೆ ಸುಂಕಿರಬೇಡ್ವ ಆ ಸಾಯೇಬ? ಔರ್ಮಾನೆಯಾಗೊಂದ್ನಾಯಿತ್ತಣ್ಣ ಬೂತದಂಗೆ! ಆ ನಾಯಿನ್ಸಿಳ್ಳಾಕ್ಕರದಿ ದ್ದೇನೆ ಚೂ ಬುಟ್ಬುಟ್ಟಾಣ್ಣ ನನ್ಮೇಲೆ! ನಂಗೇಸ್ಗಾಬ್ರಿ ಆಗೋಯ್ತೂಂತ! ಆವೊತ್ತಾದಂಗ್ಯಾವೊತ್ತೂ ಆಗಿರ್ಲಿಲ್ಲ ಪಿಕೀರು!....ಒಂದ್ದಿನ ಪಡಕಾನೇಗ್ಹಾಸೆ ತ್ಕೊಂಡೋಗಿ, ಮುನಿಯಂಗ್ಧ ಬಾಯ್ಸಿ, ಎಲ್ಡಾಣೆ ಯೇಡ ಯೀರ್ಬುಟ್ಟು, ಕಾಸೆಸೀಬೇಕೂಂತ ಜೋಬೀಕ್ಕೈಯಾಕಿದ್ರೆ, ಜೋಬೀಲೇನದೆ ಕಾತಾಕೂತು!

ಆ ಮುನ್ನ್ಯಂಕೂಡ ಯೆದರದಿದ್ದೋನು ಆವೊತ್ತು ಆ ನಾಯ್ಗೆದರಕೊಂಬುಟ್ಟೇಣ್ಣ ! ಆ ಯೆದರ್ಕೇಲಿ ಬುದ್ದಿ ಕೆಟ್ಟೋಯ್ತು....ಪಕ್ಕಾಗಿತ್ತು ಒಂದ್ಗುಂಡ್ಕಲ್ಲು....ಚಟಕ್ನದನ್ಕೈಗೆತ್ಕೊಂಡಿ ಜೈ ಅನುಮಾನ್ನಂತ ನಾಯಿ ತಲೇಗೆಸದ್ರೆ, ಆ ನಾಯೀಗ್ತಗಲ್ದೆ ಆ ಸಾಯೇಬನ್ಗೇ ಬೀಳೋಣ್ವ ನಂಗಾಚಾರಕ್ಕೆ ಆ ಕಲ್ಲು ! ಸರೆ, ಕಣ್ಮುಚ್ಚಿಡೋದ್ರೊಳಗೆ ನಾಯ್ಬಂದು ಮೇಟ್ರೇಗ್ಬಿತ್ತು. ಪೋಲೀಸ್ನೋರು ಬಂದ್ರು, ಜೈಲ್ಗಾಕಿದ್ರು, ಕೋರ್ಟಿನಲ್ಲಿಚಾರಿಸ್ದ್ರು....ನಾ ಬೇಕೂಂತ ಎಸೀನಿಲ್ಲ ಆ ಕಲ್ನ. ನೋಡು, ಅದ್ರತಗ್ಲಿ ಆ ಸಾಯೇಬ ಸತ್ತೋದ್ನಂತೆ. ಸರಿ, ಜೀವಕ್ಜೀವ ಅಂದ್ರು, ನನ್ಗಲ್ಲಿಗಾಕದ್ರು. ಇದೊ, ಈಗಿಲ್ಗಾನಿ. ಇಷ್ಟೆ ನೋಡಣ್ಣ ನಡದಿದ್ದು.

**ಯೆಮ**—ಏ ಚಿತ್ತರ್ಗುತ್ತ ! ಈನೇಳಿದ್ದೆಲ್ಲ ಸರೀಗದೇನೊ ?

**ಚಿತ್ತರ್ಗುತ್ತ**—ಎಲ್ಲಾ ಸರೀಗದೆ ಮಾಸೋಮಿ !

**ರತ್ನ**—ಇನ್ನೇನೆಮಣ್ಣ ನಿನ್ತೀರ್ಮಾನಕ್ಕಿನ್ನಾ ಎಸ್ಟೊರಸ ಕಾಯ್ಬೇಕು ?

**ಯೆಮ**—ನಿಂಗೆಸ್ಟ್ಸಲಿ ಯೋಳ್ಬೇಕ್ರತ್ನ, ಇದು ಬೂಮಿ ಅಲ್ಲ, ನರಕಾಂತ ? ಏನಿಲ್ದಿದ್ದುಟ್ಟಿಸ್ಕೊಂಡಿ ನಿನ್ನಿಗಿದಾಕೋಕೆ ತಳಾರ ಮಾಡಬೇಕ ? ನಮ್ಮಲ್ಲೆಲ್ಲ ಸೀದಾ ಸಾಚಾ ಸರ್ಸರ್ನೇ ನಡೀಬೇಕು....ನಿನ್ಕೇಸ್ ಪೈಸಲ್ಲಾಯ್ತು....ನಿಂಗ್ಕುಲಾಸೆ ಆಯ್ತು....(ರತ್ನ ಪೇರಿ ಕೀಳ್ತಾನೆ) ತ ಡಿ, ತ ಡಿ, ಓಡೋಗ್ಬೇಡ....ಏ, ಚಿತ್ತರ್ಗುತ್ತ ! ಇವನ್ನ್ಯಾರಾ ಕರಕೊಂಬಂದೋರಿಲ್ಗೆ ?

**ಜವಾನ**—ನಾನೇ ಬುದ್ಧಿ !

**ಯೆಮ**—ಏನ್ಸೊಳ್ಳೊಟ್ಟೆ ! ನೋಡಿ ಮಾಡಿ ಅಲ್ವ ಕೆಲಸ ಮಾಡಾದು ? ಗೆಣ್ಯ ! ನೆಟ್ಗೆವನ್ಕರಕೊಂಡೋಗಿ ಪಡಕಾನೇಗ್ಬುಟ್ಬಾ ! ಎಲ್ಗಾನಾಸಾಯೇಬ?

**ಜವಾನ**—ಸೊರ್ಗಕ್ಕರಕೊಂಡೋಗೌರೆ ಬುದ್ದಿ.

**ಯೆಮ**—ಸೊರ್ಗಕ್ಕ ? ಏನ್ಸಿಕ್ಕಾಪಟ್ಟೆ ಆಗೋಯ್ತು ! ಅಂದಾದರ್ಬಾರಾ ಇದು ? ಇವನ್ನ ಪಡಕಾನೇಗ್ಬುಟ್ಬುಟ್ಟೆ, ವಾಪೀಸ್ಬರೋವಾಗಾಸಾಯೇಬನ್ಗೆಳಕೊಂಬಾ ಇಲ್ಲಿ. ವುಟ್ಟಿದಬ್ಬ ಮಾಡೋಂವ ಔಂಗೆ !

**ಒನ್ನೆ ಮಂತ್ರಿ**—ಮಾಸೋಮಿ ! ಮದ್ಯೆ ಇವಾಂ ಯೋಂವ ಮಾತಾಡಾಂವ ತಲೆವ್ರೋಕ ಅಂತ ಬೊಯ್ಯಾಬ್ಯಡಿ. ದಣಿಯೋರ್ಗೇನೆ ಎಲ್ಲಾ ಗೊತ್ತದೆ.

ಆದ್ರೂ ಮಂತ್ರಿಗೋಳು ಅಂತನ್ನಿಸ್ಕೊಂಡು, ಮಾಸೋಮೀರು ಯಿಟ್ಕುಂಡ್ಮಡ ಕೇನ ಕೆರಕೊಂಡುಂಡಮೇಗೂನೆ—

**ಯಮ**—ಮಂತ್ರಪ್ಪ! ನೀನೇನ್ನಮೀಗ್ಬುದ್ವಾದ ಯೋಳ್ತೀಯೊ, ಇಲ್ಲ ದಾಸರರಕತೆ ಮಾಡ್ತೀಯೊ?

**ಒನ್ನೆಮಂತ್ರಿ**—ಉಂಟಾ ಬುದ್ದಿ! ದಣಿಯೋರ ಮುಂದೆ....ಇನ್ನೇನಿಲ್ಲ... ನರಕಕ್ಕೊಂದ್ಸಲಿ ಬಂದೋರ್ನ ಯಿಂದಕ್ಕಳೀಸ್ಬುಟ್ರಿ, ಜನಾ ನೆಗಾಡಾಕಿಲ್ವ ಬುದ್ದಿ—ಇದೆಂತಾ ದರ್ಮ ಇದು, ಈಗಿದ್ಬಂಗಿನ್ನೊಂದ್ಗಳಿಗೇಗಿಲ್ಲ ಅಂತ....

**ಯಮ**—ಸಾಕೋ ಮಾಂಠಾಯ! ನಿಂಗೇನ್ಗೊತ್ತದೊ ದರ್ಮಸ್ಸೊರೂಪ! ದರ್ಮಾಂತಂದ್ರೇನ್ದೊಡ್ಡುಗ್ಗಂಬಳಕಾಯ್ಕೆಟ್ಟೋಯ್ತೇನೊ ಕಂಡೋರ್ಕಣ್ಗೆಲ್ಲ ನೆಟ್ಕಾಕಳಾಕೆ? ದರ್ಮಾಂತಂದ್ರೆ, ನನ್ಮಂತ್ರಿ, ದರ್ಮಾಂತಂದ್ರೆ ಮಾಡಿದ್ತೆಪ್ಪಿಗೆ ಮುಸುಕಾಕ್ಕೊಂಡಿ ಮುತ್ಕೊಡಾದಲ್ಲ. ತೆಪ್ಮಾಡಿ, ಅದನ್ಯಾರಾರ ತೆಪ್ಪೂಂತ ತೋರಿಸ್ಕೊಟ್ರೆ, ಔದಣ್ಣ ತೆಪ್ಪೂಂತ ಒಪ್ಕಳ್ಳಾದು, ತಿದ್ಕಳ್ಳಾದು ದರ್ಮ!

**ಒನ್ನೆ ಮಂತ್ರಿ**—ಮಾಸೋಮಿ—

**ಯಮ**—ಸಾಕಣ್ಣ! ನೀನ್ಸಂಬ್ಳ ಈಸ್ಕೊಂತೀಯ, ಮಾತಾಡಾದು ನಿನ್ದರ್ಮ. ನಾನ್ಸಂಬ್ಳ ಕೊಡ್ತೀನಿ, ನೀನ್ಕಿರಲಿದ್ದನ್ಕಿವೀಗಾಕ್ಕಾಳ್ಳಾದು ನನ್ಕರ್ಮ. ನೀನೇಳಾಯ್ತು, ನಾನ್ಕೇಳಾಯ್ತು. ಎತ್ಬಾರ್ದ ಅಂಡೀನಾಚೆ!

**ಎಳ್ಡೆ ಮಂತ್ರಿ**—ದಣಿಯೋರೊಸಿ ಅಪ್ಪಣೆ ಕೊಟ್ರೆ—

**ಯಮ**—ಆಂ! ನಡೀಲಿ ನಿಂ ಪುರಾಣಾನೂನೆ.

**ಎಳ್ಡೆ ಮಂತ್ರಿ**—ಯೆಚ್ಗೆ ಯೋಳಾಕಿಲ್ಲ ಮಾಸೋಮಿ. ತಮಗೇಳೋ ಸಕ್ತಿ ನಂಗಿಲ್ಲ. ಆದ್ರೂನೆ—

**ಯಮ**—ನೋಡು ಮಂತ್ರಪ್ಪ! ಯೆಚ್ಗೆ ಯೋಳಾಕಿಲ್ಲ ಯೋಳಾಕಿಲ್ಲ ಅಂತದ ರಾಗೇನೆ ಒಂದನಮಂತ್ರಾಯನ್ಸ್ಮೂತಿ ಮಾಡ್ಬುಟ್ಟೆ. ಯೋಳೋದನ್ನಂಗೇಳ್ಬಾರ್ದ? ಯೆಚ್ಗೆ ಯೋಳಾಕಿಲ್ಲ ಅಂದ್ರೆ ಒಂದ್ಮಾತೆಚ್ಚಾಗ್ನಿಲ್ವ? ನಿಂಗೇಳೋ ಸಕ್ತಿ ಇಲ್ಲಾಂತ್ತಿಳದ್ಮೇಲೆ ಅದ್ಯಾಕೇಳೋಕೋಯ್ತಿ? ಬಾಯ್ತುಂಬ ಬಿಸ್ಕತ್ತುಂಬ್ಕೊಬಾರ್ದ? ಯೋಳೋದನ್ನಂಗೇಳ್ಮತ್ತೆ!

**ಎಳ್ಡ್ನೆ ಮಂತ್ರಿ**—ಏನಿಲ್ಲ ಮಾಸೋಮಿ ! ತಾವಿವನ್ನ ಪಡಕಾನೇಗ್ಕಳೀಸ್ಬುಟ್ಟ ಆ ಸಾಯೇಬನ್ಕರತತ್ತಾ ಅಂದ್ರಲ್ಲ, ಆ ಸಾಯೇಬನ್ಸೇರಿಸ್ಕೊಬಾರ್ದು ಸೊರ್ಗಕ್ಕೆ ಅನ್ನೋದು ಇಂದ್ರಪ್ನೋರ್ಗೆ ಗೊತ್ತಿಲ್ದೇನೆ—

**ಯಮ**—ಅಣ್ಣಯ್ಯ ! ಆ ಇಂದ್ರಂಗ್ಗೊತ್ತಿಲ್ಲ ಅಂತಾನೆ ನಾನೂ ಯಿಂದಕ್ಕೆಳ ಕೊಂಬಾ ಆ ಸಾಯೇಬನ್ನ ಅಂದಿದ್ದು ! ಅರ್ತಾಯ್ತ ? ಯಾವಾಗ್ಲೂನೆ ಯೆಂಡ ಕುಡಕೊಂಡಿ—ನೀ ಕುಡಿಯೋ ವುಳಿಯೆಂಡ ಅಲ್ಲ ರತ್ನ—ಅದ್ಕುಡೀತಿದ್ರಾರ ಔನ್ಗ್ನ ಸುದ್ದಾಗಿರ್ತಿತ್ತು—ನೀನೀಗುಗುಳ್ಳಿಲ್ವ ಅಮ್ರುತಾಂತ ಸಕ್ರೆ ಪಾನಕ—ಅದೇ ಔನೀಗೆಂಡ—ನಾವೂ ಕುಡೀತೀವಿ—ಆದರವನಂಗ್ಕುಡಿಯಾಕಿಲ್ಲ—ಅದನ್ಮೂರೊತ್ತೂನೆ ಮೊಕ ಮೂತಿ ಕಾಣ್ದೆ ಕುಡ್ಕೊಂಡಿ ಸಿಕ್ಕಿದ ಸೂಳೇರ್ಜೊತೇಲಿ ಒದ್ದಾಡ್ತಿರೋನ್ಗೆ ಆ ಇಂದ್ರುಗ್ಗೊತ್ತಲ್ವ ದರ್ಮದ ಯವಾರ ! ಐ ! ಆಯ್ತು. ಮೂರನೇಯೋರೇನಾರ—ಉಂಟೋ ಕೊಕ್ಕೆ ?

**ಮೂರ್ನೆ ಮಂತ್ರಿ**—ಬುದ್ಯೋರಿದ್ರಿಗೆ ಬಾಯಿ ಬಿಡಾಕೇನೆ ಬಯ್ಯಾಗ್ತದೆ ?

**ಯಮ**—ಅನುಕೂಲಾಯ್ತು ! ಬಾಯೇ ಬುಡಬೇಡ !

**ಮೂರ್ನೆ ಮಂತ್ರಿ**—ಅಂಗುಂಟ ನನ್ನೊಡ್ಯ ! ನಮ್ನಮ್ದರ್ಮ ನಾವ್ನಡೀಸ್ಬೇಡ್ವ ?

**ಯಮ**—ಔದಣ್ಣ, ನಮ್ಕರ್ಮ ಕರಗಬೇಡ್ವ ! ಆಗಲಿ ನಿಂದೂನೆ—

**ಮೂರ್ನೆ ಮಂತ್ರಿ**—ಇನ್ನೇನಿಲ್ಲ ಮಾಸೋಮಿ—ನರಕಕ್ಬಂದೋರ್ನ ಯಿಂದಕ್ಬುಡಾದು ಇದವರಗ್ಯಾವಾಗ್ಲು ನಡದಿಲ್ಲ. ಈಗೀ ಒಸಾ ರೂಲೀಸ್ಜಾರೀಗ್ತಂದ್ರೆ ಬಲೆ ತಪ್ಪಿ ಆಯ್ತದೆ ಮಾಸೋಮಿ !

**ರತ್ನ**—(ಇದ್ವಗೂ ಸುಂಕಿದ್ದೋನು) ಏನೆಲ್ಲಾರೂನೆ ಮಾತಾಡ್ಕೊಂಡ್ಸಾಮೀಲಾಗಿ ಈ ಸಬೂಬಿನ್ಮೇಲ್ನ ಬೂಬ್ನುರಿಸ್ತಿದ್ದಂಗ್ಕಾಣಿಸ್ತದಲ್ಲ ! ಅ! ಸೆಟ್ಟ ಸೌತೇಕಾಯ್ಸಿಕ್ಕ್ಯಾಕಸ್ಸಾವಿರ ಸುಳ್ಳೇಳ್ದ ಅಂದಂಗೆ ! ಏನೆಲ್ಲಾರೂ ಸೇರ್ಕಂಡಿ ನನ್ನಿಲ್ಲೆಕೊಳೆ ಆಕೋಕ್ಮಾಡದಂಗದೆ !

**ಯಮ**—ಛೆ ! ಛೆ ! ಛೆ ! ಅಂಗೇನಿಲ್ಲಣ್ಣ !

**ರತ್ನ**—ಮತ್ತೆ ! ಮಂತ್ರಿಗೋಳಂದ್ರು ಒಸಾ ರೂಲೀಸ್ಜಾರೀಗ್ತರಬಾರ್ದೂಂತ ! ನಾನೇನಾರ ಯಮಾ ಆಗಿದ್ರೆ, ನ್ಯಾಯ ಸೊಟ್ಟಾಪಟ್ಟಾಗೋದಾಗ ಅದನ್ನರೀ

ಗ್ನಿಲ್ಲಾಸಕೆ ಒಂದಲ್ಲ, ಎರಡಲ್ಲ, ಎಷ್ಟ್ಯೇಕಾದ್ರಸ್ಟು ಒಸಾ ರೂಲೀಸ್ಮಾಡಾಕ್ಬುದ್ತಿದ್ದೆ. ಒಂದ್ಕಲ್ಲಿನ್ಕಂಬ ಉರಳೋದ್ರೆ, ಅದನ್ನೆತ್ತಾಕ್ಕೆಸ್ಟಕಲ್ಲಾಕ್ತಾರೆ ಅದರಡೀಗೆ! ಎಸ್ಟೂಲೀಸಾಕಿದ್ರೆ ತಾನೆ ದರ್ಮದ ಒಂದ್ರೋಮದ ತೂಕಕ್ಕಿಂತಾತ! ಏನೋ ಯೋಳ್ಬಂಗೆ! ಮಂತ್ರಿಗೋಳಂತ ಯೆಸರದೆ ಅಂದ್ಬುಟ್ಟೆ ಮನಸೊ ಇಚ್ಚೆ ಮಾತಾಡ್ತಾರೆ.

**ಯೆಮ**—ಏನಂತ ಒಸಾ ರೂಲೀಸೇ ಬೇಕಿಲ್ಲ, ರತ್ನ! ನಮ್ಮಂತ್ರಪ್ಪನ ಗ್ನಾನಕ್ಕೊಸಿ ಸಾಣೆ ಇಡೀಸ್ಬೇಕು, ಅಸ್ಟೆ. ಇದವರೆಗ್ಯಾರನ್ನೂ ಇಲ್ಲಿಂದ ಬುಟ್ಕೊಡ್ತಿಲ್ಲ ಅಂದ್ರಲ್ಲ....ಯಿಂದೆ ಸತ್ತಿವಾನನ್ಕಳೀಸಿದ್ನ ಮರತ್ಬುಟ್ಟಾರೆ ಔರು!

**ಮೂರ್ನೆ ಮಂತ್ರಿ**—ಸತ್ತಿವಾನನ ಸಮಾಚಾರ, ಮಾಸೋವಿ—

**ಯೆಮ**—ತಗದಲ್ಲ ಅಳೀ ಕಡತಾನ! ನಿಂಗ್ಗೊತ್ತದಾ ರತ್ನ ಆ ಕತೆ?

ರತ್ನ—ಅದೇನೆ—ಆ ಸತ್ತಿವಾನೋಗ್ಬುಡೋತ್ಲೂನೆ....ಸಾವಿತ್ರಿ....ನಿನ್ನತ್ರ ಏನೋನೋ ವರ ಕೇಳ್ಕೊಂಡಿ....ಅಂಗೇನೆ ಮಕ್ಕಳು ಬೇಕು ಅಂದ್ಲಂತೆ.... ನೀನೂ ಅಡ್ಡ್ಯಾನ್ದಲ್ಲಿ ಊಂ ಅಂದ್ಬುಟ್ಟ್ಯಂತೆ....ಆಮೇಕೆ, ಅ ರೇ ರೇ ರೇ ಪೆಚ್ಚಾಯ್ತಲ್ಲ ಅಂದ್ಬುಟ್ಟೆ.........

**ಯೆಮ**—ಓ! ನಿಂಗೂನೆ ಅದೇ ಕತೇನ! ಎಲ್ಲಿಂದೆಲ್ಲೋಗಿದ್ರೂನೆ ಮೂರನೇಯೋನ್ಮುಸುಡೀಗ್ಮಸಿ ಬಳಿಯೋದೆ ಒರ್ತು—ಈವೊತ್ಕೇಳ್ಕೊ ಸರಿಯಾದ ಸಂಗತೀನ....ಯಿಂದೆ, ಬಲೆ ಯಿಂದೆ, ಒಂದ್ದಿನ ಇಂದ್ರು ಇಲ್ಲಿಗ್ಬಂದಿದ್ದ. ಅದ್ಯಾಕ್ಬಂದಿದ್ನೊ ಮರ್ತೋಯ್ತು. ಅಟ್ಟೆ ಯೆಂಗಿಸ್ರೇನೊ ಅರಿಸ್ನಕುಂಕಮ ಕೈಲ್ಲೋ ಓಗಿದ್ರಂತ ಕಾಣ್ತದೆ. ಅಂಗೇ ಒಸಿ ಅರಟೆ ಬಡಿಯೋಂವ ಅಂತ ಬಂದಿದ್ದ. ಕುಂತ್ಕೊಂಡಿ ಅಂಗೇನೆ ಅದು ಇದು ಮಾತಾಡ್ತಿದ್ವೊ. ಮಾತಾಡೋಕೇನಾಗ್ಬೇಕೇಳು! ಮಾತಾಡ್ತಿದ್ದಂಗೇನೆ ಅಂಗೇ ಮಾತಿಗ್ಮಾತ್ಬಂತು— ಗಂಡ ಯೆಡ್ತಿ ಅಂತ....ಇಂದ್ರು ಅಂದ: 'ಐ ಬುಡೋ, ಗಂಡಾಯೆಡ್ತಿ ಎಲ್ಲಾ ಕಂಡಾರೆ. ಎಲ್ಲಾ ಯೆಡ್ತೀರೂ ಒಂದೇನೆ. ಜೀವ ಇರೋತನಕ ಗಂಡ, ಜೀವ ಓದ್ಮ್ಯೇಲ್ಮಿಂಡ' ಅಂದ. ನಂಗ್ಬಲೇ ರೇಗೋಯ್ತು. 'ಇಂದ್ರು! ನಿಂಗ್ಸಪ್ರಪಂಚದ ಯವಾರ ಒಂದಿಂಕ್ರನಾರ ಗೊತ್ತಿಲ್ಲ! ಸುಂಕೆ ಮಾತಾಡ್ಬುಟ್ರಾಗೋಯ್ತು ನಂಗೂ ದೇವರ್ಬಾಯ್ಕೊಟ್ಟಾನೆ ಅಂತ!' ಅಂದೆ. ಇಂದ್ರು

ತಲೆ ಆಡಿಸ್ತ ‘ನೋಡು ಯಮು! ಯಾವ್ನಾರ ಬಂದಿ, ಇಂದ್ರುಂಗ್ಮೀಸೆ ಇಲ್ಲ ಕಾಣೊ ಅಂದ್ರೆ, ನಾನೇನೆಗರಿ ಬೀಳಾಕಿಲ್ಲ. ಐ ಕುಂಡಾ, ಕಣ್ಣಾದಾ ನಿನ್ಗೆ ಅಂದ್ಬುಟ್ಟೆ ಔನ್ಗೀ ಬಾರ್ಮೀಸೆ ತೋರೀಸ್ತಿದ್ದೆ!’ ಅಂದ....ಇಂದ್ರುಗಾಗ ಮೀಸೆ ಬಲೆ ಪಸಂದಾಗಿತ್ತು ರತ್ನ! ನೋಡು, ಉದ್ದಕ್ಕಂಗ್ತಿರೀಚ್ಬುಟ್ಟು ಬುಟ್ಟಾಂತಂದ್ರೆ, ತುಟೀನೆಳ್ಡೂ ಕಡೆ ಕೈಯ್ಯಂತಿರಬೇಡ್ವ ಮೀಸೆ! ಥ್! ಅದೇ ನೇಳ್ತಿ ಆ ಇಂದ್ರೂ ಮೀಸೆ ಗತ್ನ!...ಔನ್ಯಾವಾಗಾಗಂದನೋ ಇಲ್ವೋ ‘ಇಂದ್ರು! ಈಗ್ನಿನ್ಮಾತ್ಸುಳ್ಳಂತ ತೋರೀಸ್ಬುಟ್ರೆ ಏನ್ಮಾಡೀಸ್ಕೊಂತೀಯ?’ ಅಂದೆ. ಇಂದ್ರು ಅಂಗೇನೆ ಎಡಗೈಲಿ ಮೀಸೆ ಸವರ್ಕೋಂತ ‘ಈ....ಈ ಮೀಸೆ ಬೋಳಿಸಾಕ್ಬುಟ್ಟೇನು!’ ಅಂದ. ಸೈ ಅಂದಿದ್ದೇನೆ ಕೆಲಸ, ‘ಅದೀಗ ಬಾಜಿ! ಒಂದರಕ್ಸಣದಾಗ್ಬಂದ್ಬುಡ್ತೀನಿ. ಇಲ್ಲೆ ಕುಂತಿರು’ ಅಂದ್ಬುಟ್ಟೆ ನೆಟ್ಟಗ್ಬೂಮೀಗ್ಬಂದೆ ನೋಡ್ರತ್ನ!....ಬೂಮಿ ಆಗ್ಬಲೆ ಚೆಂದಾಗಿತ್ತು, ನರಕಾಂತಂದ್ರೆ ಅಸಂಯ್ಯಾಯ್ತಿತ್ತು! ಈಗಿನ್ಕಾಲ ಎಲ್ಲಾ ತಳಾತಳಾಕು. ಆಗೇನ್ನನ್ಮಾತ್ಸವಾ ಅನ್ಸಾಕೆ ಬೂಮೀಲೇನುಡಕಾಡ್ಬೇಕಾಗಿತ್ತ ಜನ್ಕೆ—ಕಣ್ಣಿಗ್ಬೂದ್ಕನ್ನಡಿ ಆಕ್ಕೊಂಡು?....ಓದ್ದೇನೆ, ಕಣ್ಮುಚ್ಕೊಂಡಿ ಯಾವ್ನೊ ಅಬ್ಯಾಪಾರಿ ಸಾದೆ ಕಡೀತಿದ್ದೋನ್ನೆಳಕೊಂಬಂದೆ. ನೋಡು, ಔನೇ ಆ ಸತ್ತಿವಾನಂತ ಆಮೇಕ್ಗೊತ್ತಾಯ್ತು. ಔನ್ನೆಳಕೊಂಬಂದ್ರೆ, ಬಂದೇಬುಟ್ಲು ಔನಿಂದ್ಗೊಂಟೇನೆ ಔನೆಡ್ತಿ, ಆ ಸಾವಿತ್ರಿ! ಎಲ್ಲೀಗಂಟ ಅಂತೀಯ—ಇಲ್ಲೀಗಂಟ ರತ್ನ—ಇಂದ್ರೂ ಕುಂತಿದ್ದ ಇಲ್ಲೇನೆ—ಇಲ್ಲೀಗಂಟ! ಸರಿ ಮತ್ತೆ! ಔರನ್ಕರಕೊಂಬಂದಾಯ್ತು. ನನ್ಬಾಜೀನೂ ಗೆದ್ದ್ತು. ಸರಿ, ಸುಂಕೇನ ಕರಕೊಂಬಂದದ್ದು! ಔರ್ಕೇಳೀದ್ದನ್ನೆಲ್ಲ ಕೊಟ್ಟು ಯಿಂದಕ್ಕಳಿಸಿದ್ದೂ ಆಯ್ತು...ಇದೇನೆ ನೋಡಪ್ಪ ನಡದಿದ್ನಡದಂಗೆ...ಆಮೇಕೀಚೋರಿ ತಿರಗಿ ‘ಇಂದ್ರು—’ ಅಂದೆ. ಔನಿಂದೇನೆ ನಿಂತಿದ್ದ ನಂಕೇರಿ ಅಜಾಮ! ಇಂದ್ರೂ ಮೊಕ ಯೆಣೀದ್ಮೊಕ ಆಗೋಗಿತ್ತು!...ಈ ಮಾತ್ನೀನ್ನಂಬ್ದೆ ಓದ್ರೆ ಸೊರ್ಗಕ್ಕೋಗ್ನೋಡು, ಇಂದ್ರೂ ಮೊಕದ ಮೇಲ್ಮೀಸೆ ಅದೋ ಅಂತ.

ರತ್ನ—ಯಮಣ್ಣ! ನೀನೇನೇಳಿದ್ರೂ ಸರಿ, ಆ ಊ ಅನ್ನದಂಗೆ ಎಲ್ಲಾನೂ ಒಪ್ಕೊಂತೀನಿ. ನಂ ಬ್ರಾಮ್ರುಂದಂಗೆ ನೀನಾಡಿದ್ದು ನಂಗೆ ವೇದವಾಕ್ಯ! ನನ್ನೀನ್ಪಡಕಾರ್ಸೇಗ್ಕೇಳಿಸ್ತೀಯ, ಇಲ್ಲ ಇಲ್ಲೇ ಕೊಳೆ ಆಕ್ಕೊಂಡ್ಸಾಯಿಸ್ತೀಯ?

**ಯಮ**—ಮೊದಲೇ ಯೋಳ್ನಿಲ್ವ ರತ್ನ, ನಿಂಗ್ಳುಲಾಸೆ ಆಯ್ತೂಂತ ! ನಮ್ಮ ಮರ್ಯಾದೆ ಅಂಗಂತದೆ, ನಮ್ಮೂರಲೀಸಂಗಂತದೆ. ಇನ್ನೇನು ? ನಮ್ದೊಂದೆ ಮಾತು, ನೋಡು : ರೂಲೀಸದೆ ಅಂದ್ಬುಟ್ಟೆ ಒಬ್ರೊನ್ನತ್ಕುಯ್ಯಾಕಿಲ್ಲ ನಾವು. ಒಬ್ರೊನ್ನಿವ ಉಳೀಸಾಕೇಸಾರ ರೂಲೀಸದಾ ಅಂತ ಉಡಕ್ತೀವಿ. ಇಲ್ದೆ ಓಯ್ತು—ಎಚ್ಚೂ ಕಡಮೆ ಒಂದೊಸಾ ರೂಲೀಸ್ಮಾಡಾಕ್ತೀವಿ. ರೂಲೀಸಿರ್ಲಿ, ಇಲ್ದೆ ಓಗ್ಲಿ, ನಮ್ಮ್ಯಾದೊಂದೇ—ನಂಪ್ರಜೆಗೋಳ್ಸುಕವಾಗಿರಬೇಕೂಂತ. ಅಂಗಿ ಲ್ದೇನೆ ಪ್ರಜೆಗೋಳೆಲ್ಲ ಪಿಚಕಾರೀಲಿ ಕೆಸರ್ತುಂಬ್ಕೊಂಡಿ ನಮಗಿಕ್ತಾನಿದ್ರೆ, ನಾವ್ಯಾಕಣ್ಣ ದೊರೇಂತ್ಕುಂತಿರಬೇಕಿಲ್ಲಿ !

**ರತ್ನ**—ಯಮಣ್ಣ ! ನಿನ್ಮಾತ್ಕೇಳ್ತಿದ್ರೆ, ಈ ನರಕದ ನ್ಯಾಯ ನೋಡಿದ್ರೆ, ಯಮಣ್ಣ—ಒಂದ್ಸಲ ಡಕಾನೆ, ಒಂದ್ಸಿಕ್ಕಪ್ಪಡಕಾನೆ, ನನ್ನಂಜಿ, ನನ್ನೇವಾರ್ಸಿ ಇವರಿಲ್ಲಿದ್ಬುಟ್ರೆ—ನೀನೇ ಬೇಡಾಂತ ಕತ್ತಿಡಿದ್ದಬ್ಬಿದ್ರೂನೆ ನಾನೋಯ್ತಿರನಿಲ್ಲ ಯಮಣ್ಣ !

**ಯಮ**—ಏನ್ಮಾಡಾದು ರತ್ನ ! ನಮುಗ್ಬೇಕೂ ಅಂದಿದ್ದೆಲ್ಲ ಸಲೀಸಾಗ್ಸಿಕ್ಬು ಡೋವಂಗಿದ್ರೆ ನಾವ್ಯಾಕಿಂಗಿರಬೇಕೇಳು. ನೋಡು, ನನ್ಗೂನೆ ಮೆಟ್ರೆ ಮಿಸಿಕ್ದಂಗಾಯ್ತದೆ ನಿನ್ಕುಳೀಸ್ಬೇಕಂದ್ರೆ. ಆದ್ರೆ ನಾವ್ಯಾರ್ಗೂ ಜುಲ್ಮಿ ಮಾಡಾಕಿಲ್ಲ. ಔರಾರ್ಕುಸಿ. ನಾಮಿನ್ನೊಬ್ಬನ್ಗೆ ಜುಲ್ಮೀ ಮಾಡ್ದಂಗೆ ಇನ್ನೊಬ್ಬ ನಮಿಗ್ಜುಲ್ಮಿ ಮಾಡಿದ್ರೆ ಸೈಸ್ಯಾತ !

**ರತ್ನ**—ಯಮಣ್ಣ ! ಇನ್ನಿಲ್ಲಿ ತಳಾರ ಮಾಡಿದಸ್ಟೂನೆ ಓಗೋವಾಗ್ನಮಗೆ ಸಂಕಟ ಎಚ್ಚಾಯ್ತದೆ. ಓಗಾದನಕ ಬೇಗ ಓಗಿಬಿಡಾನ.

**ಯಮ**—ನಂ ಜವಾನನ್ಕಳೀಸ್ತೀನಿ ರತ್ನ ! ಜತೇಗೆ—ನಿನ್ಕರಕೊಂಡೋಗಾಕೆ. ನನ್ಗೀ ಕಾಬೊಸಿ ನೆಟ್ಗದ್ದಿದ್ರೆ ನಾನೇ ಅಲ್ಲೀತನಕ ಬರ್ತಾನಿದ್ದೆ.

**ರತ್ನ**—ಐಯೊ, ಪರವಾಗಿಲ್ಲ ಯಮಣ್ಣ !

**ಯಮ**—ಆದ್ರೆ, ಓಗಾಕ್ಮುಂಚೆ, ರತ್ನ, ಒಂದೇ ಒಂದಾಡ್ಬುಡು. ತಿರಗೂನೆ ನೀ ಬರೋದ್ಯಾವಾಗ್ಲೊ !...ಯಾರೋ ಅಲ್ಲಿ ! ಆ ಸಾಯೇಬನ್ನೆಳಕೊಂ ಬಂದ್ಮೇಲೆ ಸಾನಾ ಮಾಡಿಸಾಕೆ ಆ ದೊಡ್ಡುಡಾಣದಲ್ಲಿ ನಾಸ್ತಾಗ್ಕ್ಯೆಯೆಣ್ಣೆ ಕಾಯ್ಸು. ಚೆನ್ನಾಗುರಿ ಆಕ್ಬುಟ್ಬಾ !....ಔನ್ಬರೋದ್ರೊಳ್ಗೆ ಅಂಗಂದ್ಬುಡು

ರತ್ನ....ಯಾವ್ದೋಂತ? ಆ ಯಿಸ್ನೂಗೆ ಬೇಕೂಪಾಂತ ಬೋದಿದ್ದೀಯಲ್ಲ, ಅದ್ನ!

ರತ್ನ—ಓ ಅದಾ!

ಪದವಿ ನೋಡ್ಕೊಂಡ್ಬಿಡ್ತೀನನ್ನೋದ್
ಲೋಕಕ್ಕೊಂದಾಳ್ರೋಗ!
ಇದ್ನ ಕಾಣ್ಬೌದೆಲ್ಲಾರೂನೆ
ಇಸ್ನೂನೊಗಳೋದ್ರಾಗ!

ಏನಿಸ್ನೂನೊ! ಬೆಪ್ಪಂಗ್ಬಿದ್ದೌನ್
ಆಲಿನ್ ಸೌಂದ್ರುದ್ಮೆದ್ದ!
ಅಲ್ನಲ್ಟೆಳ್ಯಾಕ್ಬೀಪ್ತಾನಿರಾಕ್
ಅಸುಮಗೂನ ಸುದ್ದ?

ಬುಳ್ತೀಲೌಂಗೊಂದಿಂಕ್ರಾನಾರ
ಬುದ್ಧಿ ಗಿದ್ದಿ ಇದ್ರೆ!
ಯೋಚ್ನೆ ಬೇಡ್ವ—ಯಾವಾಗ್ನಾರ
ಆಲೊಡದುಳ ಬಿದ್ರೆ?

ಇಸ್ನೂಂತಂದ್ರೆ—ಬ್ರಮ್ಮಂಗಪ್ಪ!
ಯೆಚ್ಗೆ ಯೋಳೋದ್ಯಾಕ?
ಮಗನೆ ಮೊದ್ಲಿನ್ಮುದ್ದೆ ಆದ್ರೆ
ಅಪ್ಪ ಯೆಂಗಿರಬೇಕ!

ನಾನೇನಾರಾ ಯಿಸ್ನಾಗಿದ್ರೆ
ಗೊತ್ತಾ ಏನ್ಮಾಡ್ತಿದ್ದೆ?
ಯೆಂಡದ ಸೌಂದ್ರುದ್ಮೆದ್ದ ಕ್ಕೋಗಿ
ಝಾಂಡ ಆಕ್ಬುಡ್ತಿದ್ದೆ!

ಸೇಸನ್ನಾವಿರ್ತಲೆಗೋಳ್ನೂವೆ
ಸಾಲಾ ಈಸ್ಕೊಂಬುಟ್ಟು

ಸೌಂದ್ರಕ್ಬಾಯಿಟ್ಟೇರ್ಬಾಂತಂದ್ರೆ—
ಸೌಂದ್ರಕ್ಸೌಂದ್ರೆ ಛಟ್ಟು !

ದೊಡ್ಡೊಂದ್ಸಾಂದ್ರ ಕಾಲೀನಾದ್ರೆ
ಇನ್ನೂ ಓವೆ ಆರು !
ಆಲು ತುಪ್ಪ ವೊಸ್ರು ಎಣ್ಣೆ
ಕಬ್ಬಿನ್ಹಾಲು ನೀರು !

ಮಿಕ್ಕಿದ್ದಾರ್ನ ಮುಂದಿಟ್ಕೊಂಡಿ
ಭೂ ಮಂತ್ರಾಂದ್ರೆ ಆಯ್ತು !
ಇಷ್ಟೂ ಆದೋನ್ಸಕ್ತಿ ಅಂದ್ರೆ
ಎಲ್ಲಾ ಯೆಂಡಾಗೋಯ್ತು !

ಬುದ್ದಿ ಇದ್ದೋರ್ಗೆಲ್ಲೈತ್ಸಕ್ತಿ ?
ಏನೇಳ್ಕೊಂಡೇನ್ಬತ್ತು !
ಸಕ್ತಿ ಇದ್ದೋರ್ಗ್ಬುದ್ದಿ ಇಲ್ದಿ-
ದ್ರೆದೂ ಒಂದು ಗತ್ತು !

ದೊಡ್ಡೋನಿಸ್ನು ಕಲ್ತ್ಕೊಂಬಾರ್ದ
ಚಿಕ್ಕೋನ್ಕುಡಕನ್ಸೇರಿ ?
ಛೆ ! ಛೆ ! ಛೆ ! ಛೆ ! ಎಲ್ಲಾರುಂಟ !
ಆಲ್ನಲ್ಲೆ ಔನ್ಗೋರಿ !

ನಾನಿನ್ನೋಯ್ತೀನೆಮಣ್ಣ.

**ಯೆಮ**—ನೆಪ್ಪಿರ್ಲಿ ರತ್ನ ! ಈ ಕಾಲೊಸಿ ನೆಟ್ಗಾದ್ಮೇಲೆ—

**ರತ್ನ**—ನಾನೂ ಓಬತ್ತೀನೆಮಣ್ಣ ! ನೆಪ್ಪಿರ್ಲಿ ! ಗರೀಬರ್ನ ಮರೀಬಾರ್ದು.

**ಯೆಮ**—ಉಂಟಾ ರತ್ನ ! ಏ ಎನ್ಮೆ ತಮ್ಮಣ್ಣ ! [ಅಂತ ಜವಾನನ್ಕರದು] ಈ ರತ್ನನ್ನೆನ್ನಿನ್ಮೇಲೆ ಕುಂಡ್ರಿಸ್ಕೊಂಡಿ ಜೇಗ ಔನ್ಪಡಕಾನೇಗ್ಬುಟ್ಬಾ....ಈ ಕಾಲೊಸಿ ವಾಸಿಯಾಗೋತ್ಲು ಸಿಂಪಡಕಾನೇ ತಾವ್ಬತ್ತೀನಿ ರತ್ನ ! ಮರೀಬೇಡ.

**ರತ್ನ**—ನೀನ್ಬರ್ಲೇ ಬೇಕು ಯಮಣ್ಣ ! ಬರ್ಲೇಬೇಕು. ನಾ ಬತ್ತೀನೆಮಣ್ಣ ಇನ್ನು. ಮಾತಾಡ್ತಿದ್ದಷ್ಟೂನೆ ಮಾತಾಡ್ತಾನೆ ಇರ್ತೀವಿ. ಬತ್ತೀನಿ. ನಮ

ಸ್ಕಾರ. ಮಂತ್ರಿಗೋಳ್ಗೆಲ್ಲ ಸರಣಾರ್ತಿ. ಏನೋ ಅಪ್ಪಿ ತಪ್ಪಿ ಉಚಾಯ್ಸಿ ಅಂದಿದ್ರೆ ಮಾಫ್ಮಾಡ್ಬುಡಿ....[ಜವಾನನ್ಗೆ] ಐ ಇಲ್ಬೇಡಾಣ್ಣ....ಓಗೋವಾಗೇನ್ರ ತಲೆಕಟ್ಬಿಡಿದಾತು ತಲೆಗೆ....ಬೀದೀಲತ್ಕೊಂತೀನಿ ಬಾ....ಎಲ್ಲಾರ್ಗೂನೆ ಒಟ್ಗೆ ನಮೋನ್ನಮ ! [ಒಂಟೋಯ್ತಾನೆ]

**ಯಮು**—ನಮೋನ್ನಮ ರತ್ನ ! ಯೆಂಡ ಕುಡಕಂಡೆಲ್ಲಾರ ನೂರಕಾಲ ಆಯಾಗಿರು !....ಏನೋ ಎಲ್ಲಾರೂನೆ ಮಂಕಿಡದಂಗೆ ಸುಂಕ್ನಿಂತಿದ್ದೀರಿ? ಯೋಳ್ರಿಲೇ ! ಯೆಂಡಕುಡಕ ರತ್ನನ್ಗೆ—

**ಎಲ್ಲರೂ ಒಟ್ಗೆ**—ಜೈ !

[ಪರದೆ ಕಳಚ್ಕೊಂತದೆ.]

## ಪರದೆ ಮುಂದ್ಬರೋರು

ಯೆಜಮಾನ್ರು

ಅಮ್ಮಾವ್ರು

ಜವಾನ ಬೋರ

# ಕಂಬ್ಳಿ ಸೇವೆ

[ಮನೆ ರೂಮ್ನಲ್ಲೆ ಜಮಾನ್ರು ಚೋನಿಗ್ಬಿದ್ದು ಲೀ ಅಂಗೆ ಟಳಾಯಿಸ್ತಾರೆ. ಮೊಕ ದ್ತುಂಬ ಏನೋ ಯೋಚ್ನೆ ಮೆತ್ಕೊಂಡದೆ. ಅಂಗೇನೆ ಮೆತ್ಕೊಂಡಿದ್ದೆಲ್ಲ ಮಾಯ್ವಾ ಯ್ತದೆ. ಯೆಜಮಾನ್ರು ನಿಂತ್ಕೊಂಡೆಡ್ತೀಗ್ಕೂಗ್ತಾರೆ.]

**ಯೆಜಮಾನ್ರು**—ಲೇ ! ಬಾರೇ ಇಲ್ಲಿ !

**ಅಮ್ಮಾವ್ರು**—[ಒಳಗಿಂದಲೇನೆ] ಏನ್ಮಾರೊತ್ತು ಒಡಕೋಂತಿರ್ತೀರಿ ಸುಂಕೆ?

**ಯೆಜಮಾನ್ರು**—ಇಲ್ಬಾರೇ ಇಲ್ಲಿ !

**ಅಮ್ಮಾವ್ರು**—[ಬಂದು] ಹುಂ ! ಬಂದಾಯ್ತು ! ಏನ್ಬಾಗ್ಯ ಅರ್ದ್ಹೋಯ್ತದಿಲ್ಲಿ ?

**ಯೆಜಮಾನ್ರು**—ನೋಡೆ ! ಈಗ್ಯಾಕೊ ಒಸಿ ದಿನ್ದಿಂದ ಸುಡುಗಾಡು ಬಲೆ ಕನಸಾಯ್ತದೆ. ಅದ್ಕೆ ನೋಡು—

**ಅಮ್ಮಾವ್ರು**—ಸರಿ ಮತ್ತೆ ! ಆಪಾಟ ತಿಂತಾಸಿದ್ರೆ ಕನಸಾಗ್ದೆ ಯೇನಾ ಯ್ತದೆ? ಅಜೀರ್ಣ ಅಗತ್ಕೊಳ್ಳಾದು ಸುಂಕೇನ ! ಕನಸೂ ಆಯ್ತದೆ, ಕಾಯಿಲೇನೂ ಆಯ್ತದೆ ! ನಾನೋಯ್ತೀನಿನ್ನು—ಮುಸುರೆ ತೊಳೀಬೇಕು.

**ಯೆಜಮಾನ್ರು**—ಒಸಿ ತಡಿಯೆ ! ಅಜೀರ್ಣ ಆಗಿ ಕನಸಾದರೆ ಏನ್ಯೋಚನೆ ಇಲ್ಲ. ಆದರೆ....ಯಾಕೋ ಈ ಕನಸು ಅಂದರೆ—

**ಅಮ್ಮಾವ್ರು**—ಸರಿ, ಏನ್ಮಾಡಬೇಕು ಅದಕ್ಕೆ ?

**ಯೆಜಮಾನ್ರು**—ಏನ್ಶೈಲ್ಲಾರ ಯಾತ್ರೆ ಗೀತ್ರೆ—

**ಅಮ್ಮಾವ್ರು**—ಎಲ್ಲಾ ಗೊತ್ತದೆ ! ಯಾತ್ರೇಗೆಲ್ಲಿಗೋ ?

**ಯೆಜಮಾನ್ರು**—ಎಲ್ಲಿಗೇಂತಂದ್ರೆ! ಎಲ್ಲಾ ದೇವಸ್ತಾನಕ್ಕೂ ಓಗಾದು, ದೇವರ ದರ್ಸನ ಮಾಡ್ಕಂಬರಾದು !

**ಅಮ್ಮಾವ್ರು**—ಆಗಬೈದು ! ಅಟ್ಟೆ ಬುಟ್ಟ್ಕೊಂಡ್ಗಳಿಗೆ ಎಲ್ಲಾದರೂ ಓದೀರಿ, ಜೋಕೆ ! ಅಂಗೇನ್ರ ಪೂಜೆಪುನಸ್ಕಾರ ಮಾಡಬೇಕೂಂತಿದ್ರೆ ಮನೇಲೆ ಮಾಡಿ !

**ಯೆಜಮಾನ್ರು**—ಅಲ್ಲ ಕಣೆ ! ಮನೇಲೆಂತ ಪೂಜೇನೆ ಮಾಡಾದು ?

**ಅಮ್ಮಾವ್ರು**—ಕುಂತ್ಕೊಂಡ್ರಾಮಾಯಣ ಗೀವಾಯಣ ಪಾ ರಾ ಯ ಣ ಮಾಡಿ.

**ಯೆಜಮಾನ್ರು**—ನಂಗೋದಾಕೇ ಬರಾಕಿಲ್ವಲ್ಲೆ !

**ಅಮ್ಮಾವ್ರು**—ಅದೇನೋ ಸಿಂ ಸುಡುಗಾಡು ಪೂಜೆ ವ್ರತ ಮನೇಲಾಗದೇ ಓದ್ರೆ ಅದು ಬೇಡಲೇ ಬೇಡ.

**ಯೆಜಮಾನ್ರು**—ಅಲ್ವೆ ! ಅದೇನ್ಮನಸೋಯಿಚ್ಚೆ ಮಾ ತಾ ಡ್ತೀ ಯ ಲ್ಲೆ ! ಅದೆಂತಾ ವ್ರತಾನೆ ಮನೇಲ್ಮಾಡಾದು—ಅದಾರಾ ಯೋಳ್ಬರ್ದ ! ಥು !.... (ಒಸಿ ಒತ್ಸುಂಕಿದ್ದು) ಲೇ ಮನೇಲೆ ಮಾಡ್ತೀನಿ ಕಣೆ ! ಕಂಬ್ಳಿ ಸೇವೆ ಮಾಡ್ತೀನಿ !

**ಅಮ್ಮಾವ್ರು**—ಕಂಬ್ಳಿಸೇವೆನಾ ! ಏನದು ಕಂಬ್ಳಿಸೇವೆ ?

**ಯೆಜಮಾನ್ರು**—ಯೆಂಗಸರಗೆಲ್ಲ ಯೆಂಗ್ಗೊತ್ತಾಯ್ತದೆ ಈ ಯಿಚಾರ ! ಅದು ಒಂದ್ದಳಿ ಸೇವೆ. ಒಂದು ಕಂಬ್ಳಿ ಕೆಳಾಗಡೆ ಬಚ್ಚಿಟ್ಕೊಂಬುಟ್ಟು, ಯೆಣ ಕುಂತಂಕ್ಕುಂತ್ಬುಡಾದು. ಬಲೆ ತಕಲೀಫಿನ್ವ್ರತ ಅದು ! ಆದ್ರು ಬಲೆ ದೊಡ್ವ್ರತ ಅದು !

**ಅಮ್ಮಾವ್ರು**—ಏನೆಸ್ಟೊತ್ತಾಯ್ತುದೊ ಈ ಸೇವೆ ?

**ಯೆಜಮಾನ್ರು**—ಏನೊಂದ್ವಾರ ! ಎರಡ್ವಾರ !

**ಅಮ್ಮಾವ್ರು**—ಅಸ್ಟ್ದಿನಾನಾದ್ರೆ ಅದೂ ಬೇಡ !

**ಯೆಜಮಾನ್ರು**—ಐ ನಿ ನ್ಗೊ ಣ ಗಾ ಟ ಕ್ಕೆ.... ಇನ್ನೆಸ್ಟೊತ್ನಲ್ಲಾಗಬೇಕೂಂತೀಯ ?

**ಅಮ್ಮಾವ್ರು**—ಏನೊಂದ್ಗಂಟೆ ಆದರೆ ಪರವಾಗಿಲ್ಲ. ಏನೋ ಒಂದ್ದಿನ ಆದ್ರೂನೆ ಓಗ್ಲಿ ಅನ್ಬಾದು.

**ಯೆಜಮಾನ್ರು**—ಉದ್ಧಾರಾಯ್ತು ! ಒಂದಿವಸ್ದಲ್ಲಿ ಮುಗಿಸೊ ಸೇವೆ ಅದೆಂತಾ ಸೇವೇನೆ ? ಸೇವೆ ಮಾಡಿದಾಂದ್ರೆ ಮಾಡಿದೋನರ್ದ ಆಗೋಗ್ಬೇಡವ ! ಓಗ್ಲಿ. ಈವೊತ್ರಾತ್ರೆ ನಾಳೆ ಒಂದ್ದಿನ. ಆಗಬೌದ ?

**ಅಮ್ಮಾವ್ರು**—ಈವೊತ್ರಾತ್ರೆ ನಾಳೆ ಒಂದಿನಾನ ?

**ಯೆಜಮಾನ್ರು**—ಆ ! ಅಷ್ಟೆ !

**ಅಮ್ಮಾವ್ರು**—ಯಾಕೋ ನಂಗೊಪ್ಪೋಕಿಲ್ಲ....ಓಗ್ಲಿ ಈವೊತ್ರಾತ್ರೆ ನಾಳೆ ಒಂದ್ದಿವಸ್ದಲ್ಲಿ ಕಾಟ ಕಳೀಸ್ಬುಡಿ.

**ಯೆಜಮಾನ್ರು**—[ಅವರಿಗ್ಕುಣಿಯೋವಂಗಾಯ್ತುದೆ. ಆದ್ರೂನೆ ತಡಕೋಂತಾರೆ.] ಲೇ ! ಏನ್ತಮಾಸಿ ಮಾಡ್ತೀಯೇನೆ ನನ್ನ ?

**ಅಮ್ಮಾವ್ರು**—ಏನ್ನಿಮ್ಮನ್ತಮಾಸಿ ಮಾಡಾಕೆ ಮನೇಮುಂದೆ ತೋರಣ ಕಟ್ಟಿದಾ ?

**ಯೆಜಮಾನ್ರು**—ಲೇ ! ನೀ ಬಲೆ ಒಳ್ಳೇವ್ಳೆ ! ಆದ್ರೆ ನೋಡು, ಈ ವ್ರತ ಎಂತಾದ್ದೂ ಅಂತಿದ್ದೀಯ ? ಈ ಸೇವೆ ಮಾಡ್ತಿರೋವಾಗ ಯೆಂಗಸು ಮಾತಾಡ್ಸೋದಿರ್ಲಿ, ಏನಾರಾ ವಸಿ ಇಣಿಕ್ನೋಡಿದ್ರೆ ಸಾಕು—ಸಾವಿರ ಸೀಳಾಗೋಯ್ತದೆ ಕಪಾಲ ! ಆದ್ರಿಂದ ವುಸಾರಿ ! ಎಲ್ಲಾರಾ ಬಂದ್ಗಿಂದೀಯೆ ಒಳೀಕೆ ! ಈಗ್ಲೆ ಯೋಳೀನಿ—ಆಮೇಲೇಸಾರ ಅನಾವುತ ಆಗೋದ್ರೆ ನನ್ಸಂಕೆ ಬೊಯ್ಯಾಬ್ಯಡ !

**ಅಮ್ಮಾವ್ರು**—ನಾನೇನೂ ಬರಾಕಿಲ್ಲ. ನಿಮ್ಮಷ್ಟಕ್ನೀವ್ಮಾಡಿ ನಿಂ ಸೇವೇನ.

**ಯೆಜಮಾನ್ರು**—ಸೇವೆ ಪೂರ್ತಿ ಆದಮೇಲೆ ನಾಳೆ ಸಂಜೆ ನೋಡೋಂವ ನಡಿ. [ಅಂತ ಓಯ್ತಾನಿದ್ದೋಳನ್ನ ಯಿಂದಕ್ಕರದು] ಲೇ ! ಯೋಳಿದೀನ್ನೋಡು ! ನಾಳೆ ಸಂಜೀತನಕ ಒಳಕ್ಬರಬೇಡ ! ಬಂದ್ರೆ, ಮೈನಾಗಿರೋ ಮೂಳೇನೆಲ್ಲ ಲಟ ಲಟಾಂತಂಡೋಯ್ತುದೆ ! ಯೋಳೀನ್ನೀಗ್ಲೇನೆ ! ಇದು ಬಲೇ ಬಲೇ ವ್ರತ ಕಣೆ !

**ಅಮ್ಮಾವ್ರು**—ನೀಮೇನೇಳ್ಬೇಕಾಗಿಲ್ಲ. ನಿಮ್ಮಷ್ಟಕ್ನೀವ್ಮಾಡಿ. ನಾನೋಯ್ತೀನಿ. (ಓಯ್ತಾಳೆ)

**ಯೆಜಮಾನ್ರು**—ಅಲ್ಲ ! ಏನುಚ್ಚಯೆಂಗಸ್ರು ! ಕಂಬ್ಳಿಸೇವೇಂದ್ರೆ ಅದೂನೆ ದಿಟಾ ಅಂದ್ಕೊಂಬುಟ್ಟಳಲ್ಲ ! ಬೆಪ್ಪು ! ಬೆಪ್ಪು!... ಹ್ಹ ! ಹ್ಹ ! ಹ್ಹ ! ಒಂದೂ ವರ್ದಿನ !....ಹ್ಹ ! ಕ್ರುಸ್ನಪರಮಾತ್ಮ ಆಡ್ದಂಗಾಟ ಆಡಬಾರ್ದು, ಬಿಡು !.... ಒಂದೂವರ್ದಿನ !....ಬೋಲಾ ! ಲೋ ! ಜೋರಾ !....

**ಚೋರ**—(ಮರೇಲಿ) ಬುದ್ದಿ !

**ಯೆಜಮಾನ್ರು**—ಓಡ್ಬಾರೊ ಬಡ್ಡೀಮಗನೆ !

**ಚೋರ**—(ಮರೇಲಿ) ಬಂದೆ ಬುದ್ದಿ !

**ಯೆಜಮಾನ್ರು**—ಬೇಗ ಬರೋಕೇನೊ ನಿನಗೆ ?

**ಚೋರ**—(ಬಂದು) ಇಲ್ಲ ಬುದ್ದಿ. ಬುದ್ಯೋರು ಒಲೆ ಕುಸಿಯಾಗೌರೆ ಈವೊತ್ತು !

**ಯೆಜಮಾನ್ರು**—["ಸ್" ಅಂದಿದ್ಲೇನೆ, ಬಾಗಿಲತ್ರ ಓಗಿ, ಅತ್ತಾಗಿತ್ತಾಗ್ನೋಡಿ, ಬಾಗಿಲ್ಮುಚ್ಕೊಂಬಂದು] ಚೋರ ! ನೀನ್ನನ್ನತ್ರ ಚಾಕ್ರೀಗ್ಸೇರ್ಕೊಂಡಾಗ್ಲಿಂದ ನಾನ್ರಾಜ ನೀನ್ಮಂತ್ರಿ ಅಂದಂಗಿದ್ದೀವಿ. ಔದೂ ಅಲ್ವೊ ?

**ಚೋರ**—ಅಲ್ಲಾ ಅಂದೋರುಂಟೆ, ಬುದ್ದಿ! ಅಮ್ಮಾವ್ರೂನೆ ರಾಣೀವ್ರಿದ್ದಂಗೇ ಔರೆ !

**ಯೆಜಮಾನ್ರು**—ನನ್ನೆದರೀಗ್ನನ್ನೆಡ್ತಿ ಸುದ್ದಿ ಯೆತ್ಬೇಡ—ತಲೆನೋಯ್ತದೆ ನಂಗೆ !... ಅಂಗೂನೆ ಔಳ್ರಾಣಿ ಅಂತನ್ನು... ನೋಡು, **ಚೋರ**—ಸಾಸ್ತ್ರದಲ್ಲೇ ಳದೆ—ರಾಜರ್ಗೆ ರಾಣಿ ಒಬ್ಬಳು ಸಾಲ್ದು. ಬಂಗಾರದವರಾಗಬೇಕೂಂತ !

**ಚೋರ**—ಸರಿ ! ಸುವ್ವಿ ಅಂದ್ರೆ ಗೊತ್ತಾಗಾಕಿಲ್ವ ಸುಬ್ಬಕ್ಕನ ರಾಗ ! ಮಾಸಾಮಿಯೋರ್ಗೆಲ್ಲಾರೊ ಬಂಗಾರದೋರು ?

**ಯೆಜಮಾನ್ರು**—ಸರ್ವಗ್ನ ಅಂದ್ರೆ ನೀನೇ ಚೋರ ! ಬೆಳ್ತೋರಿದ್ರೇನೆ ಅಸ್ತ ನುಂಗೋನು ಅಂದ್ರೆ ನೀನು ! ಒಂದ್ಮಾತಾಡಾಕಿಲ್ಲ—ಒಂದ್ಪುಸ್ತಕ ಓದ್ದಂಗಾಯ್ತದಲ್ಲ ನಿನ್ಗೆ !

**ಚೋರ**—ಅದಕೇನೆ ಬುದ್ದಿ, ಒಂದ್ಮಾತ್ನಲ್ಲೇ ಮುಗೀಸ್ಬುಡಿ. ಪುಸ್ತಕ ಅಂಡಕೊಬೇಡಿ.

**ಯೆಜಮಾನ್ರು**—ನೋಡು ಚೋರ ! ಈ ದಿನ ಕೆಂಪೀಗೆ ಸಂಜನ್ಗೂಡಿಗ್ಬತ್ತೀನಂತ ಯೋಳಿದ್ದೀನಿ. ಆದರೀ ಸುಡಗಾಡೀಗೆ ಇದೆಲ್ಲೋ ಗೊತ್ತಾಗ್ಬುಟ್ಟೆ ಮನೆ ಬಿಟ್ಟೋಗಾಕೆ ಅವಕಾಸ ಕೊಡಾಲ್ಲ. ಅದ್ಕೆ ಒಂದ್ಬಿನ ಒಂದ್ರಾತ್ರೆ ಕಂಬ್ಳಸೇವೆ

ಮಾಡ್ತೀಸೀಂತ ಡೋಂಗೊಡದ್ಬುಟ್ಟೆ, ಚಕ್ಕರೊಡ್ಡಿ ಕೆಂಪಿತಾವೋಗ್ಬೇಕೂಂತ. ಚೆಂದಾಗಿಲ್ಲ ಉಪಾಯ ?

**ಬೋರ**—ಬಲೆ ಚೆಂದಾಗದೆ ಬುದ್ಧಿ !

**ಯೆಜಮಾನ್ರು**—ಈ ಸಮಯುದಲ್ಲಿ, ಬೋರ, ನೀನ್ಸಾಯ ಒಸಿ ಮಾಡಬೇಕು.

**ಬೋರ**—(ಐನೋರ್ಮೇಲೆ ನಿಗಾ ಮಡ್ಗಿ, ಉಸಾರಿ ಆಗ್ಬುಟ್ಟು)ಏನಾ ಬುದ್ಧಿ ಅದು ?

**ಯೆಜಮಾನ್ರು**—ಏನೂ ಇಲ್ಲ ನೋಡು ! ಈ ಮನಾಳೀಗೆ ನನ್ಸೇವೆ ನಡುವೆ ಬರಬಾರ್ದೂಂತ ಯೋಳಿದ್ದೇನೆ. ಆದರ್ನಂಬಾಕಿಲ್ಲ ! ಯಾವಾಗ್ಬಂದಿಣಿಕ್ಕೋಡ್ತಾಳೋ ! ಅಂಗೇನಾರ ಈ ಸೇವೇನೆಲ್ಲ ಡೋಂಗಿ ಅಂತ್ತಿಳದ್ರೆ—ಬೇಡ, ನಾಯಿಪಾಡು ನನಪಾಡು. ಅಂಗದಕೇನೆ, ನೀನೊಸಿ ಮನಸುಮಾಡ್ಬುಟ್ಟು ನಾ ಬರೋಗಂಟ ಇಲ್ಕುಂತಿರಬೇಕು ನೋಡು.

**ಬೋರ**—ಅದಕೇನಿಲ್ಲ ಬುದ್ಧಿ—ಆದ್ರೆ ಸಿಕ್ಕೊಂಬುಟ್ರೆ ಸಿಗದಾಕ್ಬುಟ್ಟಾರು, ಅಣ್ಣಾಯ್ನೀಗ್ರಾಯ್ಮಾಡಾಕ್ಬುಟ್ಟಾರು ಅಮ್ಮಾವ್ರು ! ಮಾಫ್ಮಾಡಿ ಬುದ್ಧಿ !

**ಯೆಜಮಾನ್ರು**—ಏನುಚ್ಚಂಗರಟ್ತೀಯೊ ! ನೀ ಸುಂಕೆ ಕುಂತ್ಕೊ ಇಲ್ಲಿ. ನಿನ್ತಂಟೆಗೊಳ್ಬಂದ್ರೆ ನಾ ಸುಂಕಿರ್ತೇನೇನೊ ?

**ಬೋರ**—ಅದೆಲ್ಲ ಸರೇನೆ ಬುದ್ಧಿ ! ಆದರೂ ಗರೀಬ್ನೊಟ್ಟೇಮೇಲೊಡೀಬೇಡಿ ಬುದ್ಧಿ !.... ಈ ನಿಮ್ಮಪಸ್ಮಾರಕ್ಕೆ ನನ್ನ್ಯಾಕೆಳೀತೀರ್ಬುದ್ಧಿ—ಗ್ರಾಮಸಾಂತೀಗೆ ತಳವಾರನ ತಲೆ ಬೋಳಿಸ್ದಂಗೆ. ನಾನ್ನಿಮಿಗ್ಸಾಯ ಮಾಡಾನೆ—ಅದಮ್ಮಾವರಿಗ್ತಿಳಿಯಾನೆ—ನನ್ಪಾಡ್ಬೇಕಾ ಆಮೇಕೆ ? ಅಲ್ಲಿನ್ನಡವೆ ನಾಲ್ಗೆ ಸಿಕ್ಕಂಡಂಗೇನೆ!

**ಯೆಜಮಾನ್ರು**—ಇಲ್ಲ ಬೋರ ! ನೀ ಒಪ್ಲೇಬೇಕು. ನಿನ್ಸುದ್ದೀಗೊಳ್ಬರದಂಗೆ ನಾನ್ನೋಡ್ಕೊಂತೀನಿ—ನಿನಗ್ಯಾಕಾ ಯೋಚ್ನೆ ?

**ಬೋರ**—ಸದ್ಯಕ್ನಿಮ್ಮನ್ನೀವ್ನೋಡ್ಕಂಡರೇನೆ ಸಾಕಾಗದೆ ಬುದ್ಧಿ !

**ಯೆಜಮಾನ್ರು**—ಬದುಕಿದಂಗಾಯ್ತು ! ನನ್ನೆಡ್ತಿ ಯೋಳ್ದಂಗ್ಕೇಳಬ್ಯೆದು, ನಾನೇಳ್ದಂಗ್ಕೇಳಾಕ್ಬಂದಪಾ ದಾಡಿ ನಿನ್ಗೆ ! ಸೂಳೆಮಗನೆ ! ಏಶಿ ಅಂದರೆ ಪ್ರೀತಿ ಅಂತಿಯಾ ! (ಅಂತ ಒಡಿಯಾಕ್ಕೋಯ್ತಾರೆ.)

**ಬೋೀರ**—ಒಸಿ ತಡೀರಿ ಬುದ್ದಿ! ಬಲವಂತ ಮಾಡಿ ನಾಯಿಡಕೊಂಬಂದ್ರೆ ಮೊಲ ಇಡವಾತಾ ಅದು !....ಆದ್ರೂ ನೋಡಿ ಬುದ್ದಿ, ವ್ರತ ಕೆಟ್ರೂನೆ ಸುಕ ಇರಬೇಕು...

**ಯೆಜಮಾನ್ರು**—ಈವೊತ್ನಾನೇಳ್ದಂಗ್ಕೇಳ್ಬುಡು, ನಾಳೆ ನೀನೇಳ್ದಂಗ್ಕೇಳ್ತೀನಿ ನಾನು !

**ಬೋೀರ**—ಅಳೋೀ ಮಕ್ಕಳ ಬಾಯಿಗ್ಬರೆನಿಪ್ಪಲ್ಮಡಗದಂಗ್ಮಾತಾಡಾದು ಬಲೆ ಸುಲಬ ಬುದ್ದಿ !

**ಯೆಜಮಾನ್ರು**—ಮತ್ತಿನ್ನೇನ್ಮಾಡ್ಬೇಕು ಅಂತೀ ಬೋೀರ ? ಬೇಕಿದ್ರೆ ದಮ್ಮಯ್ಯಾಂತೀನಿ ! ನೀನೆಂಗಂದ್ರಂಗೆ !

**ಬೋೀರ**—ಔದ್ಬುದ್ದಿ...ಸಾವಿರ ಸಲ ಸಲಾಮಾಕ್ತೀನಿ, ಸೊಪ್ಪಿನ ಸುದ್ದಿ ಎತ್ಬೇಡ ಅಂದಂಗೆ !...ನೋಡಿ ಬುದ್ದಿ. ಆ ಮಾರ್ಕಟ್ಲಿಂಕಪ್ಪನತ್ರ ಒಂದ್ನಾಲೆ ತಾರೀಪ್ಮಾಡಿಟ್ಟೀನಿ...ಅದಕೆ...

**ಯೆಜಮಾನ್ರು**—ನಿಂಗ್ಯಾಕೆಲ್ಲಾ ಬುಟ್ಸೀರೆ ?

**ಬೋೀರ**—ನೀವ್ಮದಿವಿ ಆಗುದ್ವಾರಾದ್ರಿ ! ಬಂಗಾರದೋಳ್ನುಡಕೋರ್ಗೆ ಇದೆಲ್ಲ ಯೆಂಗರ್ತಾಯ್ತದೆ ಬುದ್ದಿ ?

**ಯೆಜಮಾನ್ರು**—ಓ ! ನಿನ್ನೆಡ...

**ಬೋೀರ**—ಆ ! ಅದ್ಕೆ ! ಅದ್ಕೆ ! ಅದ್ಕೆ !

**ಯೆಜಮಾನ್ರು**—ಎಸ್ಟಾಯ್ತದೆ ಬೋೀರ ?

**ಬೋೀರ**—ಪಾವಲಿ ಕಮ್ಮಿ ಐದ್ರೂಪಾಯಾಯ್ತದೆ ಬುದ್ದಿ !

**ಯೆಜಮಾನ್ರು**—ಇಸ್ಟೇ ತಾನೆ ! ನಾಳೆ ಸಂಜೆ—

**ಬೋೀರ**—ಆಗಬ್ಯೆದು ಬುದ್ದಿ ! ಆದ್ರೆ ಓದ್ರೆ, ಅತ್ತಿ ಬೆಳೀದ್ರೆ, ಅಜ್ಜೀನಿಂಗೊಂದ್ಪಟ್ಟೇಸೀರೆ ಅಂದಂಗೆ !

**ಯೆಜಮಾನ್ರು**—ಇಲ್ಲಾ ಬೋೀರ, ನಾಳೆ ಕಂಡಿತಾಗಿ—

**ಬೋೀರ**—ನಾಳೆ ಅಂದವ್ದೆಲ್ಲ ಆಳೇ ಬುದ್ದಿ !

**ಯೆಜಮಾನ್ರು**—ಇಲ್ಲ ಬೋೀರ, ನನ್ನಾಣೆ ನಾಳೆ ದಿನ—

**ಬೋರ**—ಏನ್ನಂಗಾಳ ತೊಳಿಯಾಕೆ ಮಂಗಳಾರಾನೆ ಆಗಬೇಕ ಅಂತೀನಿ!

**ಯೆಜಮಾನ್ರು**—ಇಲ್ಲ, ಬೋರ, ಇವತ್ಕಾಸಿಲ್ಲ.

**ಬೋರ**—ಬುದ್ದಿ! 'ಇಕ್ಕಲಾರದ ಕೈ ಯೆಂಜಲು' ಅಂತ ದಾಸರಾಡು ಕೇಳಿದ್ದೀರ ಬುದ್ದಿ?

**ಯೆಜಮಾನ್ರು**—ಇಲ್ಲ ಬೋರ, ಇವತ್ಕಾಸ್ಕಮ್ಮಿ ಅದೆ. ನಾಳೆ ಉಂಡೆ ಐದ್ರೂಪಾಯಿ ಕೊಡ್ತೀನಿ.

**ಬೋರ**—ಕೈಲಿರೋ ಕಲ್ಕೊಡಾಕಿಲ್ಲ—ಅಟ್ಟದ ಮೇಲಿರೊ ಬೆಲ್ಲ ಕೊಡತಾರಂತೆ ನಾಳೆ!....ಯಾಕ್ಬುದ್ದಿ ಸುಂಕೆ ಮಾತು?....ಉಚ್ಕೋಗ್ದೆ ಮದಿವಿ ಆಗದು, ಮದಿವಿ ಆಗ್ದೆ ಉಚ್ಕೋಗ್ದು!

**ಯೆಜಮಾನ್ರು**—ನಾ ಸುಳ್ಳೇಳ್ತೀನ ಬೋರ!....ನೋಡು....ಒಂದ್ರೂಪಾಯ್ಕೂಡ ಸರೀಗಿಲ್ಲ.

**ಬೋರ**—ಕೆಂಪೀಕಾವೋಗಾಕೆ ರೂಪಾಯ್ನಾಲ್ತದ, ಬುದ್ದಿ? ತಗೀರಿ, ತಗೀರಿ, ನೋಟೇನ್ಕಟ್ಟಗೀರಿ....ಸುಂಕೆ ತಗರಬುಗರಿ ಒಡಿಬ್ಯಾಡಿ ಬುದ್ದಿ.... ಐದ್ರೂಪಾಯಿ ಮಡಗ್ಬುಡಿ ಅಂಗೆ....ಬಿಸಿಲ್ಬಂದಾಗ್ಲೇ ಬಟ್ಟೇ ಆರಿಸ್ಕೊಬೇಕು ಬುದ್ದಿ!

**ಯೆಜಮಾನ್ರು**—ಏನೆಲ್ಲಾ ಬಲ್ಲಾನಲ್ಲೊ ಯೆಂಬ್ರಮ್ಮ! (ಐದ್ರೂಪಾಯ್ನೋಟಂಗೆಸ್ದ) ತಗೊ! ತಗೊ! ಎಲ್ಲೋಯ್ತೀಯ ನೀನು!

**ಬೋರ**—ಬೀಸೊ ದೊಣ್ಣೆ ಮೊದಲಂಗ್ತಪ್ಲಿ, ಬುದ್ದಿ! ವುಲೀ ಬೋನಿಗ್ಬಿಗ್ಗೋದು ಸುಂಕೇನಾ!

**ಯೆಜಮಾನ್ರು**—ಇರಲಿ! ಇರಲಿ! ನಾ ಮರಿಯಾಕಿಲ್ಲ ಇದ್ನ!...ಇಲ್ಬಾ! ಇಲ್ಲಿಂಗ್ಕುಂತ್ಕೊ!

**ಬೋರ**—ಉಂಟಾ ಬುದ್ದಿ, ತಾವ್ನಿಂತಿರೋವಾಗ!

**ಯೆಜಮಾನ್ರು**—ಇರಲಿ! ಇರಲಿ! ಕುಂತ್ಕೊ! ಮೊದೂಲೊಸಿ ತಪ್ಸಿದ್ದಾಯ್ತದೆ. ಆದ್ರೂನೆ ಪರವಾ ಇಲ್ಲ....ಎಲ್ಲಿ, ಈ ಕಂಬ್ಳಿ ಕೆಳಗ್ತಲೇನಾಕು (ಅಂತ ಕಂಬ್ಳಿ ಕೆಳೀಗೌನ್ನ ಕುಂಡರ್ಸಿ)....ಬೋರ! ಆ ಆಳಾಡೋಳೇನಾರ ಬಂದು ಗಿಂದು ಕಂಬ್ಳಿ ತಗೀಂತಂದ್ರೂನೆ ಎಲ್ಲಾರ ತಗದುಗಿಗದೀಯೆ! ಉಸಾರಿ!

**ಬೋೀರ**—ಎಲ್ಲಾರಾ ಉಂಟ ಬುದ್ಧಿ, ತವ್ಮ್ಮಾತಂದ್ಮೇಲೆ!

**ಯೆಜಮಾನ್ರು**—ಉಸಾರಿ, ಬೋೀರ, ಜೋೀಕೆ! ಬೇಗ ಬಂದ್ಬುಡ್ತೀನಿ!

**ಬೋೀರ**—ತಳಾರ ಮಾಡಬಾರ್ದು ಬುದ್ಧಿ !

**ಯೆಜಮಾನ್ರು**—ಇಲ್ಲ ಕಣೊ ! ಉಸಾರಿ!....ಅಬ್ಬ ! ಮುಗೀತು....ಇನ್ನೇನ್ರೈಲು ಸಿಕ್ತದೋ ಇಲ್ವೊ, ಕಾಣೆ !...ಬೇಗ್ಬೇಗ ಓಡ್ಬೇಕು (ಓಡೋಗ್ತಾರೆ)

**ಬೋೀರ**—(ಒಸಿ ಕಂಬ್ಳಿ ಅಂಗೇ ಓರೆ ಮಾಡಿ, ಸುತ್ತಾಗಲೂನೆ ನೋೀಡಿ) ಚೆ ! ಗರೀಬನ್ಗತಿ ಗುಂಗಾಡೀಗಿಂತ ಕಡೆ! ಈ ಸುಡಗಾಡು ದಮ್ಮಯ್ಯ ಅನ್ನಾಕಿಂತ ದೈವಾದೀನಾಗೋೀದಾರ ವಾಸಿ !....ಬಿಟ್ಬ್ಕೊಂಟೋೀಗೋೀಂವ ಅಂದ್ರೆ ಒಟ್ಟೆ ಕೇಳ್ಬೇಕಲ್ಲ !...ಈ ಅವ್ಮ್ಮಾವ್ರು ಯಾವಾಗ್ಬತ್ತಾರೊ, ಏನಾಯ್ತದೊ...ಆ ಪರಮೇಸ್ವರಂಗೇ ಗೊತ್ತು !...ನಾನೀಮನೇಗ್ಬಂದಿದ್ದು—ಬೀದೀಲೋೀಗೋೀ ಕುರಿಮಾರೀಮನೆ ಒಕ್ಕಂಗಾಯ್ತು !...ಅವ್ಮ್ಮಾವ್ರ ಕೈಗೇನ್ರ ಸಿಕ್ಬುಡಬೇಕು—ಯೆಂಡಕುಡಕ ಯೆಣ ಯೆತ್ತಾಕಿವ್ರೂ ದಂಡ ಕೋೀಡೋತ್ತ್ರಪ್ನಿಲ್ಲ ಅಂತಾರಲ್ಲ-ಅಂಗೆ—ತೊಪ್ಪೆ ಒತ್ಕೊಂಡೋೀಗಿ ತಾಯಿಗ್ಗಂಡ ಅನ್ನೀಸ್ಕಂಡಂಗಾಯ್ತದೆ !—ಸರಿ!...ಅರೇ ! ಬಂದ್ರಲ್ಲಪ್ಪೊ ! ಎಲ್ಲಾ ದೆಯ್ಯ ಅಂದ್ರೆ, ಬಂದೇ ಬೆಳಕಿನ ಕಂಡೀಂದ ಅಂದಂಗೆ...(ಕಂಬ್ಳಿ ಅಡೀಲಿ ಔಸ್ಕೋೀಂತಾನೆ.)

[ಅವ್ಮ್ಮಾವ್ರು ಬತ್ತಾರೆ.]

**ಅವ್ಮ್ಮಾವ್ರು**—(ಕಂಬ್ಳಿ ಸೇವೇನ್ನೋೀಡಿ) ಅಬ್ಬಬ್ಬ ! ಇಂಗೊಂದೂವರದಿವಸ ಕುಂತಿರೋೀದೆಂಗೇ ಅಂದ್ರೆ ! ಮೈಕೈಯೆಲ್ಲಾ ನೋೀವತ್ಕೊಂಬುಟ್ಟಾತು ! ನಿಮ್ದಮ್ಮಯ್ಯ ಅನ್ತೀನಿ. ನೀವ್ಬೇಡಾ ಅಂದ್ರೂನೆ ಬಂದ್ಬುಟ್ಟೆ...ಬೊಯ್ಬ್ಯಾಡಿ....ದಮ್ಮಯ್ಯ...ನೀವ್ಬೇಕಾಗಿದ್ರೆ ಯಾತ್ರೆ ಗೀತ್ರೆ ಏನ್ಬೇಕಾದರೂ ಮಾಡಿ....ಇಂಗೊಂದೂವರ ದಿವಸ ಕುಂತಿರಾದಂದ್ರೆ—ಪುಡಗಾಟಾನ ! (ಕಂಬ್ಳಿ ಕೆಳಗೀನ್ತಲೆ ಊಹೂಂ ಅನ್ತದೆ) ನಿವ್ಮ್ಮಾತ್ಮೀರಿ ಬಂದ್ಬುಟ್ಟೆ...ನಿಮೀಗ್ಬಲೇ ಕೋೀಪಾ ಬಂದದೆ ಗೊತ್ತು....ಆದ್ರೂನೆ....ನಿಮ್ದಮ್ಮಯ್ಯಾಂತೀನಿ...ನೀವೇಳ್ದಂಗ್ಕೇಳ್ತೀನಿ...ಮೇಲಕ್ಕೆದ್ದೇಳಿ.... (ಕಂಬ್ಳಿ ಇನ್ನಾ ಜೋೀರಾಗೂಹೂಂ ಅನ್ತದೆ) ನೀವೆಸ್ಟ್ಟೂಹೂಂ ಅಂದ್ರೂನೆ ನಾನ್ಕೇಳಾಕಿಲ್ಲ...ನೀವ್ತೆಗೀಲೇ ಬೇಕು...(ಅಂದಿ ಕಂಬ್ಳಿ ಎಳೀತ್ತಾಳೆ....ಬೋೀರ ನಡಗ್ತ ನಿಂತ್ಕೋೀಂತಾನೆ.) ಏನೋೀ ! ನೀನಿಲ್ಲಿ!

ಎಲ್ಲೋದ್ರೋ ಯೆಜಮಾನ್ರು ? ಮಾತಾಡೊ !...ನಿನಗೇನೊ ಬಂದಿರೋದು ! ನಾಲಗೆ ಸೇದೋಗಿದೆಯೆ ? ಮಾತಾಡು !

**ಬೋರ**—ನಂಗೇನೂ ಗೊತ್ತಿಲ್ಲ ತಾಯಿ !

**ಅಮ್ಮಾವ್ರು**—ಎಷ್ಟ್ಸಟ್ಬರ್ತದೆ ನಿಮ್ಮನ್ನೆಲ್ಲ ನೋಡಿದ್ರೆ ! ಕಳ್ಳದೇವರ್ಗೆ ಸುಳ್ಳು ಪೂಜಾರಿ! ನೀ ಸೇರ್ಬಿಟ್ರೆ ಇನ್ನೇನು—ಜೂಗಡಿಸೋರ್ಗೆ ಆಸ್ಗೆ ಆಸ್ಕೊಟ್ಟಂಗೇನೆ ! ಇನ್ನೇನು—ಆ ಆಳಾದೋಳೂರಿಗೋಗಿರ್ಬೇಕು ! ಯಾಕ್ನಿಂತಿದ್ದಿ ಸುಮ್ನೆ ! ಮಾತಾಡೊ !

**ಬೋರ**—ನಂಗ್ಯಾಕ್ತಾಯಿ ಗುಟ್ಟುಗಿಟ್ಟು. ಬುದ್ಯೋರು ಕೆಂಪವ್ವನ್ಮನೇಗೋಗ್ತೀನಿ ಅಂತ ನಂಜನಗೂಡಿಗೋಗೌರೆ.

**ಅಮ್ಮಾವ್ರು**—ಕೆಂಪವ್ವ ! ಕೆಂಪಿ ಅಂದರೆ ಸಾಲ್ದೇನೊ ! ಎಷ್ಟ್ಸಟ್ಬರ್ತದೇಂತ ! ಹುಂ ! ಹುಂ ! ಕೆಂಪೀನುಡೀಕ್ಕೊಂಡೋಗೌರೊ !

**ಬೋರ**—ಔದು ತಾಯಿ !

**ಅಮ್ಮಾವ್ರು**—ಆ ಕೆಂಪಿ ಯೆಸರ್ಕೇಳ್ದಾಗೆಲ್ಲ ಸುಂಕೆ ಮೈ ಉರಿದೋಯ್ತದೆ ! (ಅಳತೌರೆ)

**ಬೋರ**—ಸುಂಕೆ ಅತ್ತರೇನಾಯ್ತದೆ ತಾಯಿ ?

**ಅಮ್ಮಾವ್ರು**—ಬೋರ ! ನಿನ್ನಿಗಿದಾಕ್ಬುಡಬೇಕೂಂತಿದ್ದೆ. ಆದರೆ ನೀನ್ನಿಜಯೋಳದ್ದೀಂತ ಬುಟ್ಟದ್ದೀನಿ. ಬಾ ಇಲ್ಲಿ !

**ಬೋರ**—ಅಡ್ಡಬಿದ್ದೆ ನಮ್ಮವ್ವ !

**ಅಮ್ಮಾವ್ರು**—ಬೋರ ! ನೀನ್ಯಾಕಳ್ತುಂತಿದ್ದೆ ?

**ಬೋರ**—ಬುದ್ಯೋರಪ್ಪಣೆ ಅಂಗಿತ್ತು ಅವ್ವ ! ಒಲ್ಲೆ ಒಲ್ಲೆ ಅಂದ್ರೂನೆ ಬುಡದೆ ಯಿಡದ್ಬುಂಡ್ರಿಸ್ದ್ರು. ಏನ್ಮಾಡೋವ ತಾಯಿ—ಗರೀಬರ ಬಾಳು !

**ಅಮ್ಮಾವ್ರು**—ಹೌದೌದು, ಬೋರ ! ಬೋರ, ನಂಗೊಂದುಪಕಾರ ಮಾಡ್ತೀಯ ?

**ಬೋರ**—ಏನಾಗ್಩ೇಕ್ತಾಯಿ ?

ಅಮ್ಮಾವ್ರು—ಜೋರ, ನಿನ್ಮೇಲೆಂಗಿತ್ತು ಕಂಬ್ಳಿ, ಅಂಗದನ್ನನ್ಮೇಲೊದ್ದೀಸ್ತೀಯ ?

ಜೋರ—ಅದೊಂದ್ಬುಟ್ಟು ಇನ್ನೇನಾರ ಕೇಳಿ ತಾಯಿ—ಬುದ್ಯೋರಿಗ್ತಿಳಿದರೆ ಬಡದಾಕ್ಬುಡತಾರೆ ನನ್ನ. ಬೇಡಾ ನಮ್ಮವ್ವ !

ಅಮ್ಮಾವ್ರು—ಇಲ್ಲ ಜೋರ. ನಿನ್ನವರು ಬಡೀದಂಗೆ ನಾನ್ನೋಡ್ಕೊಂತೀನಿ. ಯೋಳ್ಡಂಗ್ಕೇಳು ಜೋರ !

ಜೋರ—ಈ ಒಂದ್ಸಪ ಕ್ಸಮ್ಸಿ ತಾಯಿ !

ಅಮ್ಮಾವ್ರು—ನಿನ್ಸುದ್ದೀಗವ್ರು ಬರದಂಗೆ ನಾನ್ನೋಡ್ಕೊಂತೀನಿ ಜೋರ !

ಜೋರ—ಅಂಗೇನಾರ ನನ್ತಲೇಗ್ಬಂದ್ರೆ ತಮ್ಮೇಲೆಳದ್ಬುಡ್ತೀನವ್ವ !

ಅಮ್ಮಾವ್ರು—ಅಂಗೇ ಆಗ್ಲಿ ಜೋರ !

ಜೋರ—ಅಂಗಿದ್ರೆಲ್ಲಿ ಕುಂತ್ಕೊಳ್ಳಿ ತಾಯಿ ! (ಅಮ್ಮಾವ್ರು ಕುಂತ್ಕೊಂತಾರೆ ಒಸಿ ತೊಂದ್ರೆ ಆಯ್ತದೆ...ಆದ್ರೂನೆ...ಇಂಗೀ ಕಂಬ್ಳಿ ಒದ್ಕೊಳಿ ಅವ್ವ !

ಅಮ್ಮಾವ್ರು—ನಮ್ಮಿಬ್ಬರ್ಗೂ ಎತ್ತಾಪ್ಸ ಕಾಣಿಸ್ದಂಗೊದಿಸ್ಬೇಕು !

ಜೋರ—ಇಂಗೆ ಇರ್ಲಿ ತಾಯಿ, ಏನೂ ಪತ್ತೇನಾಗಾಕಿಲ್ಲ !

ಅಮ್ಮಾವ್ರು—ಸರಿಯಾ ಇದು ?

ಜೋರ—ಓ !

ಅಮ್ಮಾವ್ರು—ಈಗ್ನೀ ಮನೇಗೊಂಟೋಗು !

ಜೋರ—ಅಪ್ಪಣೆ ನಮ್ಮವ್ವ ! (ಅಂತ ಬಾಗಿಲ್ತಾವೋದೋನೆ ಗಾಬ್ರಿಬಿದ್ದು) ಅವ್ವ! ಅವ್ವ ! ಆಜೋರಿ ರಸ್ತೇಲಿ ಬತ್ತಾರೆ ಐನೋರು !

ಅಮ್ಮಾವ್ರು—ಓ ! ಆಗ್ಲೆ ಬತ್ತಾರ ! ರೈಲು ತಪ್ಪೋಗಿರಬೇಕು. ಬರ್ಲಿ ಇವತ್ತು— ಬೂತ ಬಿಡುಗಡೆ ಮಾಡ್ತೀನಿ !....ಜೋರಾ !

ಜೋರ—ಅವ್ವ !

ಅಮ್ಮಾವ್ರು—ಅವರ ಕಣ್ಗೆಲ್ಲಾರ ಬಿದ್ಗಿದ್ದೀಯೆ ! ನೆಟ್ಗೊಂಟೋಗು ಯಿತ್ತಿಲ್ಬಾಗ್ಲಾಗೆ ! ಅವರ ಕಣ್ಗೆಲ್ಲಾರ ಬಿದ್ದೀಯೆ !

**ಬೋರ**—ಅಯ್ಯಯ್ಯಾ ! ಉಂಟೆ ಅವ್ವ ! ನಡಯೋರು ಎಡವತಾರೆ. ಎಡವವ್ಲೇ ಎಡವಿದೌನ್ಗೆ ಬೇಕೂಪ ಅಂದಾರು !

**ಅಮ್ಮಾವ್ರು**—ಬೋರ ! ನಿನ್ನೆಡ್ತೀಗೊಂದ್ಸೀರೆ ಬೇಕಲ್ವೇನೊ !

**ಬೋರ**—ಅವ್ವ ! ಅವ್ವ !

**ಅಮ್ಮಾವ್ರು**—ನಾಳೇ ದಿನ ಕೊಡ್ತೀನಿ. ಈವತ್ಮರೆಯಾಗೊಂಟೋಗು.

**ಬೋರ**—ಅಂಗೇನಾಗಲವ್ವ !...ಸದ್ಯ, ಉಲೀಬೋನ್ನಿಂದ ಬಚಾವಾದಂಗಾಯ್ತು !....ಒಳೆ ದಾಟೆದ ಮೇಗಂಬಿಗ ಮಿಂಡ ಅಂದಂಗೆ—ಇನ್ನಿವರ ಮನೆ ಕಡೆ ಮೊಕ ತೋರ್ಸಿನ ! ಅಣ ರಾಸಿ ಕೊಟ್ರೂನೆ, ಸಾಕಣ್ಣ ಈ ಅಲ್ಕ ಸಾವಾಸ.

(ಬೋರ ಓಯ್ತಾನೆ. ಒಸಿ ಒತ್ನಲ್ಲೆ ಯೆಜಮಾನ್ರು ಬತ್ತಾರೆ.)

**ಯೆಜಮಾನ್ರು**—ಥೂ ! ಕತ್ತೆಮಗನೆ ! ನಿನ್ನತ್ರ ಅಸ್ಟ್ಯಾತಾಡೋ ಒತ್ಗೇನೆ ನಂಗ್ರೈಲ್ತಪ್ಪೋಯ್ತು ! ಇನ್ನಾಸಲದ್ದಕ್ಕೆ ರಾತ್ರೀನೆಲ್ಲ ಯಿಂಗೇ ಕಂಬ್ಳಿ ಮುಚ್ಕೊಂಡ್ಕೂಂತಿರಬೇಕಲ್ಲಪ್ಪ ! ಅವಳೀಗ್ಬೇರೆ ಯೋಳ್ಬುಟ್ಟಿದ್ದೀನಿ....ಶ್ ! ಕಂಬ್ಳಿ ತೆಗೀಬೇಡವೊ ! ಒಸಿ ಅಂಗೇನಿರು !...ಮುಂಡೇದು ಒಂದ್ಬಸ್ಕೂಡ ಬುಡೋವಂಗಿಲ್ಲ ಸಂಜೇಲಿ....ಏನೋ ! ಆ ಮನಾಳಿ ಏನಾರ ಬಂದಿದ್ಲೇನೋ ನೋಡಾಕೆ ? ಮನೇಲಿಲ್ಲ ! ಬಾಗಲ್ತೆಗದಾಕ್ಬುಟ್ಟೆ ಎಲ್ಲೋ ಓಗೌಳೆ.... ಆ ಆಳ್ಮ್ಮಾಳೀಗಿನ್ನೇನೂ ಕೆಲ್ಸ ಇಲ್ಲ—ಮೂರೊತ್ತೂನೆ ಮಿಕ್ಕೋರೇನ್ಮಾಡ್ತಾರೆ ಅಂತ ನೋಡಾದೆ ಆಗೋಯ್ತು !...ಬಾಗಿಲು ಗೀಗಲೆಲ್ಲ ಸರೀಗದೆ....ಬಂದಿಲ್ಲಿಲ್ಲ ಸದ್ಯಕ್ಕೆ !....ಅಲ್ಲ, ನಾನು ರಾತ್ರೀನೆಲ್ಲ ಯಿಂಗೇ ಕುಂತು ಜಾಗರಣೆ ಮಾಡೋದಿರ್ಲಿ—ಈವತ್ನಾ ಬರ್ಲಿಲ್ಲಾಂತ ಕೆಂಪಿ ಏನಪಸ್ತೆ ಮಾಡ್ತಾಳೋ ಕಾಣ್ನಲ್ಲಪ್ಪ !....ನನಗದೆ ಬಯ !....ಇವಳಿಗನಕ ಕಣ್ಣು ಇದ್ರೂನೆ ಕುರುಡು ....ಮುಂಕಂಗೆ ಯೋಳಿದ್ನೆಲ್ಲ ಕೇಳ್ತಿರ್ತಾಳೆ. ಆದ್ರೆ ಕೆಂಪಿ—ನಾಳೆ ಏನಾರ ಇಲ್ಲಿಗೇ ಬಂದ್ಬುಟ್ರೆ !....ಬೋರ ! ನಿಂಗಿನ್ನೊಂದೆರಡು ರೂಪಾಯ್ಕೊಡ್ತೀನಿ—ಒಂದು ಬೈಸ್ಕಲ್ಲಾಕ್ಕಂಡೋಗಿ ನಂಜನಗೂಡಲ್ಲೀ ರೂಪಾಯಿವಳ್ಗೆ ಕೊಟ್ಬುಟ್ಟು ಬಾ ಮತ್ತೆ !....ಬೋರ!....ಲೋ !....ನಿದ್ದೇ ಓದೇನೊ!....ಸನಿ! ಎದ್ದೇಳೋ ಅಂದ್ರೆ !....

(ಅಂತ ಒದ್ದಿ, ಕಂಬ್ಳಿ ಕಿತ್ರೆ, ಅಮ್ಮಾವ್ರು ದುರಗಮ್ನಂಗೆಗತ್ತಾರೆ.)

**ಅಮ್ಮಾವ್ರು**—ಅಲ್ಲ, ಡೋಂಗಿ ಒಡದ್ಬುಟ್ಟು ಕೆಂಪಿಮನೇಗಾ ಓಗಾದು?

**ಯೆಜಮಾನ್ರು**—(ಮಾರಮ್ಮನ ಗುಡಿ ಕೋಳೀ ಅಂಗೆ ಬೆದರ್ತ) ಇಲ್ಲ ಕಣೆ! ಇಲ್ಲ ಕಣೆ! ಕೆಂಪಿ ಮನೇಗೋಗ್ಲೇನಿಲ್ಲ! ಇಲ್ಲೇ ಸೇವೆ ಮಾಡ್ತಿದ್ದೆ ಕಣೆ! ನಿನ್ನಾಣೆ ಕಣೆ!

**ಅಮ್ಮಾವ್ರು**—ಏನು? ಸೇವೆ!....ಸುಳ್ಳೀಳಿದ್ರಾಲ್ಲೂಂತ—'ಮನಾಳಿ,' 'ಕುರುಡಿ,' 'ಮೂಳಿ' 'ಆಳಾದೋಳು' 'ಸುಡುಗಾಡಿ'—ಸಾಸನ್ರ್ನಾಮ ಬೇರೇನ! ಹಂ!

**ಯೆಜಮಾನ್ರು**—ಇಲ್ಲ ಕಣೆ! ನಾನಂಗೇಳ್ಲೇ ಇಲ್ಲ ಕಣೆ! ನಿನ್ದಮ್ಮಯ್ಯ ಕಣೆ!

**ಅಮ್ಮಾವ್ರು**—ಏನ್ರೋಸ ಬರತದೇಂತ! ಎಲ್ಲಿಗೋಗಿದ್ದದ್ದು ನೀವು?

**ಯೆಜಮಾನ್ರು**—ಲೇ! ಸುಳ್ಯಾಕೆ ಯೇಳ್ಬೇಕು! ಇಂಗೇ ಒರಕ್ಕೋಗಿ ದೇವಸ್ತಾನ್ದಾಗೆಲ್ಲ ಪೂಜೆಮಾಡೀಸ್ಕೊಂಬಂದೆ ಕಣೆ!

**ಅಮ್ಮಾವ್ರು**—ದೇವಸ್ತಾನ್ದಾಗೆಲ್ಲಾ! ಎಷ್ಟ್ದೇವಸ್ತಾನಾನೋ ಕಾಣೆ! ಇರೋದೊಂದಾಳ್ಗುಡಿ ಬುಟ್ರೆ!

**ಯೆಜಮಾನ್ರು**—ಇಲ್ಲ ಕಾಣೆ! ನಿನ್ದಮ್ಮಯ್ಯ ಕಾಣೆ!

**ಅಮ್ಮಾವ್ರು**—ಬರೋ ಸಿಟ್ನಲ್ಲಿ—! ಕಂಬ್ಳಿಸೇವೇನಾ! ನಾ ಮಾಡ್ತೀನಿ ಬನ್ನಿ ನಿಮಿಗ್ಬೇರೆ ಸೇವೇನ! (ಅಂತ ಜುಟ್ನಡಕೊಂಡೆಳಕೊಂಡೋಗ್ತಾರೆ)

(ಪರದೆ ಜರ್ರಂತ ಜಾರ್ತದೆ)

# ಬಡವರ ಬಾಸೇಗರ್ತ

**ಅಕ್ಸ್ರ**—ಅಕ್ಷರ. (ಅಕ್ಸ್ರನೆಲ್ಲ—ಅಕ್ಷರವನ್ನೆಲ್ಲ.)

**ಅಗತ್ಕೊ**—ಮೇಲೆ ಬಿದ್ದುಕೊ, ವಶಪಡಿಸಿಕೊ. (ಅಗತ್ಕೊಳ್ಳಾದು ಸುಂಕೇನ.)

**ಅಜಾಮು**—ಕ್ಷಾರಿಕ.

**ಅಟ್ಟ**—ಮನೆ.

**ಅಡ್ಡೆ**—ಪಲ್ಲಕ್ಕಿಯನ್ನು ಹೊರುವುದಕ್ಕೆ ಹಾಕಿರುವ ಅಡ್ಡದೊಣ್ಣೆ.

**ಅಬ್ಯಾಪಾರಿ**—ಏನೂ ತಿಳಿಯದವನು. [Innocent]

**ಅಲ್ಡ**—ಉಪೇಕ್ಷೆ. (ಅನುಬೋವಸ್ತರ ಮಾತಲ್ಡ ಮಾಡಿದ್ರೆ—ಅನುಭವಸ್ತರ ಮಾತನ್ನು ಉಪೇಕ್ಷೆಮಾಡಿದರೆ.)

**ಅವ್ವಲ್**—ಉತ್ತಮವಾದುದು. (ಅವ್ವಲ್ ದರ್ಮ—ಉತ್ತಮವಾದ ಧರ್ಮ.)

**ಆಚೋರಿ**—ಆ ಕಡೆ, ಆ ಪಾರ್ಶ್ವ.

**ಆಪಾಟಿ**—ಅಷ್ಟೊಂದು.

**ಇತ್ಯರ್ತ**—ಇತ್ಯರ್ಥ, ತೀರ್ಮಾನ.

**ಇಸಂ**—ಒಬ್ಬ. [An individual]

**ಇಂಕ್ರ**—ಕೊಂಚ, ಸ್ವಲ್ಪ.

**ಇಂಗೆ**—ಹೀಗೆ

**ಇಂದ್ಗೊಂಟೆ**—ಹಿಂದುಗಡೆ. (ಕುಡುಕನಿಂದ್ಗೊಂಟೆ ಓಗು—ಕುಡುಕನ ಹಿಂದುಗಡೆ ಹೋಗು.)

**ಈಚೋರಿ**—ಈ ಕಡೆ.

**ಈಟೊಂದು**—ಇಷ್ಟೊಂದು.

**ಈನು**—ಇವನು (ಈನೇಳಿದ್ದೆಲ್ಲ—ಇವನು ಹೇಳಿದುದು ಎಲ್ಲ.)

**ಈಪಾಟಿ**—ಇಷ್ಟೊಂದು.

**ಈಸ್ಕೊ**—ತೆಗೆದುಕೊ. [Receive]

**ಉಚಾಯ್ಸು**—ಹದ್ದು ಮೀರು. (ಉಚಾಯ್ಸಿ ಅಂದಿದ್ರೆ—ಮೇರೆ ಮೀರಿ ಮಾತನಾಡಿದ್ದರೆ.)

**ಉಡಾಪೆ**—ಪೊಳ್ಳುಮಾತು, ಗಪ.

**ಉಡಾಯ್ಸು**—ಬಲವಂತದಿಂದ ಕಿತ್ತುಕೊ, ಎಗರಿಸು, ಹಾರಿಸು, ಎತ್ತಿ ಹಾಕು.

**ಎಗರ್ಸು**—ಏಳುವಂತೆ ಮಾಡು, ಹಾರಿಸು. (ಎಮ್ಕೆ ಎಗರ್ಸಿ—ಮೂಳೆಯನ್ನು ಹಾರಿಸಿ.)

**ಎಮ್ಕೆ**—ಎಲುಬು, ಮೂಳೆ.

**ಐನಾತಿ**—(ಐನಾತಿ ಇಸಂ—ಪಕ್ಕಾ ಮನುಷ್ಯ, ಅಂತಹವರು ಇನ್ನು ಇಲ್ಲ ಎಂಬರ್ಥ.)

**ಒಲ್ಲೆ**—ಉಹುಂ. (ನಾನು ಬರಲೊಲ್ಲೆ—ನನಗೆ ಬರುವುದಕ್ಕೆ ಇಷ್ಟವಿಲ್ಲ.)

**ಒಸಿ, ಒಸ್ಸಿ**—ಕೊಂಚ, ಸ್ವಲ್ಪ.

**ಔನು**—ಅವನು. (ಯೆಂಡ ಕುಡೀಸೌನಂತೆ ಔನು—ಹೆಂಡ ಕುಡಿಸಿದ್ದಾನಂತೆ ಅವನು.)

**ಔನೆ**—ಇದ್ದಾನೆ. (ಯಮ ಅನ್ನೋನೊಬ್ಬ ಔನೆ—ಯಮ ಅನ್ನುವವನೊಬ್ಬನು ಇದ್ದಾನೆ.)

**ಔಂಗೆ**—ಅವನಿಗೆ.

**ಅಂಗೇನ್ರ**—ಹಾಗೇನಾದರೂ (ಅಂಗೇನ್ರ ಇತ್ತಂದ್ರೆ—ಹಾಗೇನಾದರೂ ಇತ್ತೆಂದರೆ.)

**ಅಂಡಬೇಡಿ**—ಹರಡಬೇಡಿ.

**ಅಂಡಿ**—ಕೆಲಸಕ್ಕೆ ಬಾರದ ಸಾಮಾನು. (ಎತ್ಬಾರ್ದ ಅಂಡೀನಾಚೆ—ಕೆಲಸಕ್ಕೆ ಬಾರದುದನ್ನು ಆಕಡೆ ಎತ್ತಿಹಾಕಬಾರದೆ !)

**ಅಂದಾದರ್ಬಾರು**—ಸಿಕ್ಕಾಪಟ್ಟೆ ಆಡುವುದು, ಕಂಡಾಪಟ್ಟೆ, ಮನಸ್ಸೇಚ್ಛೆ.

**ಕಡತ**—ದೊಡ್ಡ ಪುಸ್ತಕ.

**ಕರೊ**—ಮಾಡು (ಇರೋದ್ಕೆ ಕಾಲಿ ಕರೊ, ಇಲ್ದಿದ್ಕೆ ಬರ್ತಿ ಕರೊ—ಇರುವುದಕ್ಕೆ ಬರಿದುಮಾಡು, ಇಲ್ಲದುದಕ್ಕೆ ಪೂರ್ಣಮಾಡು.)

**ಕಾಯಿಷ್ಟು**—ಪ್ರೀತಿ. [A Special Liking.]

**ಕಿರಲು**—ಕೇಳು, ಕೂಗು.

**ಕುಲಾಸೆ**—ವಿಮೋಚನೆ. [ನಿಂಗ್ಕುಲಾಸೆ ಆಯ್ತು—You are set free.]

**ಕುಸಿ**—ಸಂತೋಷ

**ಕುಂಡ**—ಕುರುಡ.

**ಕುಂಡಸುರ್ಜ**—ಕುಳ್ಳಿರಿಸು.

**ಕೇರಿ**—ಜನರು ವಾಸವಾಗಿರುವ ಮನೆಗಳ ಬೀದಿ.

**ಕೊಟ್ಟ ಕುಟ್ಟು**—ಭತ್ತವನ್ನು ಕುಟ್ಟಿ, ಹೊಟ್ಟು ತೆಗೆದು, ಅಕ್ಕಿ ಮಾಡು.

**ಕೊತ್ತಿ**—ಬೆಕ್ಕು. (ಕುಂತಾಗ್ಕೊತ್ತಿ—ಕುಳಿತಿದ್ದಾಗ ಬೆಕ್ಕು.)

**ಗಡಾರಿ**—ದಪ್ಪ ದೊಡ್ಡ ಕಬ್ಬಿಣದ ಸಲಾಕಿ.

**ಗತ್ತು**—ಒಂದು ಠೀವಿ, ಜಬರ್ಜ.

**ಗರೀಬ್ರು**—ಬಡವರು.

**ಗಾಚಾರ**—ಗ್ರಹಚಾರ.

**ಗುಂಗಾಡಿ**—ಸೊಳ್ಳೆ.

**ಗೇರಾಯಿಸು**—ಸುತ್ತಮುತ್ತಲೂ ಸುತ್ತಿಕೊ.

**ಗೈರತ್ತು**—ಜೋರು. (ನಮ್ಗೈರತ್ತೋಗಾಕಿಲ್ಲ—ನಮ್ಮ ಜೋರು ಹೋಗುವುದಿಲ್ಲ.)

**ಗಂಟ**—ವರೆಗೆ. (ಇಲ್ಲೀಗಂಟ; ಅಲ್ಲೀಗಂಟ—ಇಲ್ಲಿಯವರೆಗೆ, ಅಲ್ಲಿಯವರೆಗೆ.)

**ಚಮ್ಡ**—ಚರ್ಮ.

**ಚಾಕ್ರಿ**—ಕೆಲಸ, ಜೀತ.

**ಚಾಲು**—ಚಾಳಿ, ನಡತೆ, ಉಪಾಯ. [ಈ ಚಾಲ್ಯಾಕೆಮಣ್ಣ—Why this trick, Yama ?]

**ಚಿರಾಯ್ಸು**—ಸುಲಿ. (ಚಮ್ಡ ಚಿರಾಯ್ಸಿ—ಚರ್ಮ ಸುಲಿದು.)

**ಚಿಂದಿ ಉಡಾಯ್ಸು**—ಧೂಳೀಪಟ ಮಾಡು.

**ಜಟ್ಪಟ್ನೆ**—ಬೇಗಬೇಗ.

**ಜಮಾಯ್ಸು**—ಕೂಡಿಹಾಕು. [Store]

**ಜೀತ**—ಕೆಲಸ, ಚಾಕರಿ.

**ಜುಲ್ಮಿ**—ಬಲವಂತ.

**ಜೋಪ್ಡಿ**—ಗುಡಿಸಿಲು.

ಝಾಂಡ—ಬಾವುಟ. (ಝಾಂಡ ಅಕ್ಬುಡು—ಬಾವುಟ ನೆಡು, ಎಂದರೆ ಬೇರೂರುವುದು.)

**ಟಳಾಯ್ಸು**—ಅಲ್ಲಿಂದಿಲ್ಲಿಗೆ ಶತಪಥ ತಿರುಗು. (ಟಳಾಯಿಸ್ತಾರೆ—ಶತಪಥ ತಿರುಗುತ್ತಿದ್ದಾರೆ.)

**ಡೊಗ್ಸಲಾಮು**—ಕಪಟದ ವಂದನೆ. [A hypocritical Salute.]

**ಡೋಂಗಿ**—ಸುಳ್ಳು, ಉಡಾಪೆ, ಗಫ, ಬುರುಡೆ.

**ತಕಲೀಫ್**—ತೊಂದರೆ, ಆಯಾಸ.

**ತಗರುಬುಗರಿ**—ಸುಳ್ಳು, ತಟವಟ, ಡೋಂಗಿ, ಉಡಾಪೆ, ಗಫ.

**ತತ್ತೀನಿ**—ತರುತ್ತೇನೆ.

**ತರಾಟೇಗ್ತಗೊ**—ವಿಚಾರಿಸಿಕೊ. [Take one to task.]

**ತಸ್ದಿ**—ಅನವಶ್ಯಕವಾದ ಆಯಾಸ.

**ತಳಾರ**—ಸಾವಕಾಶ. [Delay]

**ತಾಜ**—ಸರಿ. [ಅದೆಲ್ಲ ತಾಜಾನೆ—It's all very well !]

**ತಾರೀಫ್ಮಾಡು**—ನೋಡಿ ಮೆಚ್ಚು. [Appreciate.]

**ತೊಪ್ಪೆ**—ಸೆಗಣಿ.

**ತೋಲು**—ತೊದಲು. (ತೋಲ್ತದಣ್ಣ—ತೊದಲುತ್ತದಣ್ಣ.)

**ದಫ**—ಸಲ. (ಒಂದಫ—ಒಂದು ಸಲ.)

**ದಬಾಯಿಸು**—ವಿತಂಡಾವಾದದಿಂದ ಬಾಯಿ ಮುಚ್ಚಿಸು.

**ದಬ್ಬು**—ತಳ್ಳು.

**ದಂಡಪಿಂಡ**—ವ್ಯರ್ಥವಾಗಿ ಹಾಕುವ ಕೂಳು.

**ನಿಗ ಮಡಗು**—ಕಣ್ಣಿಡು. [Keep an eye.]

**ನೆರಕು**—ಪುಡಿಮಾಡು. (ನೆರಕಾಕ್ಬುಡ್ತಿದ್ದೆ—ಪುಡಿಮಾಡುತ್ತಿದ್ದೆ.)

**ಪಡಕಾನೆ**—ಕಳ್ಳಂಗಡಿ, ಹೆಂಡದಂಗಡಿ.

**ಪಸಂದಾಗಿ**—ಚೆನ್ನಾಗಿ, ಲಕ್ಷಣವಾಗಿ.

**ಪಾವಲಿ**—ನಾಲ್ಕಾಣೆ.

**ಪಿಕೀರು**—ಭಯ, ಹೆದರಿಕೆ.

**ಪಿಚಕಾರಿ**—ಜೀರ್ಕೊಳವೆ.

**ಫಿರ್ಯಾದಿ**—ದೂರು. [Complaint.]

**ಪೇರಿ ಕೀಳು**—ಓಡಿಹೋಗು.

**ಫೈಸಲ್ಲು**—ತೀರ್ಮಾನ. [Settlement.]

**ಬಚಾವಾಗು**—ತಪ್ಪಿಸಿಕೊಂಡು ಬದುಕು.

**ಬಟವಾಡೆ**—ಕೊಡಬೇಕಾದುದನ್ನು ಕೊಡುವುದು.

**ಬತ್ತಿಕೊಡು**—ಮೋಸಮಾಡು.

**ಬರಾವು**—ಬರೆಹ, ಬರವಣಿಗೆ.

**ಬಾಗ್ಲಾಣೆ**—ಬಾಗಿಲ ಕಡೆಯಿಂದ.

**ಬಾಜಿ**—ಪಣ. [Bet.]

**ಬಾರ್ಮೀಸೆ**—ಉದ್ದವಾದ ಮೀಸೆ.

**ಬೇವಾರ್ಸಿ**—ವಾರಸುದಾರರು ಇಲ್ಲದವನು.

**ಮನಾಳಿ**—ಮನೆ ಹಾಳುಮಾಡುವವಳು.

**ಮನೀಕ್ಕೊ**—ಮಲಗಿಕೊ. (ಒಂದಾಸ್ಗೆ ಅಸ್ಕೊಂಡ್ಮನೀಕ್ಕೊಂಡೌನೆ—ಒಂದು ಹಾಸಿಗೆ ಹಾಸಿಕೊಂಡು ಮಲಗಿಕೊಂಡಿದ್ದಾನೆ.)

**ಮಸ್ತಾಗಿ**—ಹೆಚ್ಚಾಗಿ.

**ಮಳ್ಳಿ**—ಮರಳಿ, ಪುನಃ ; ಏನೂ ತಿಳಿಯದಂತೆ ನಟಿಸುವವನು. (ಮಳ್ಳಿ ! ಮಳ್ಳಿ ! ಕಾಲೆಸ್ಟ ಮಂಚಕ್ಕೆ ?)

**ಮಾಫ್‌ಮಾಡು**—ಕ್ಷಮಿಸು.

**ಮಾರಾಮಾರಿ**—ಹೊಡೆದಾಟ.

**ಮಿಲಾಕತ್‌ಮಾಡು**—ಬೆರಸು. [Mix up.]

**ಮೆಟ್ರೆ**—ಗಂಟಲು. (ಮೆಟ್ರೆ ಮಿಸೀಕ್ದಂಗೆ—ಗಂಟಲು ಹಿಸುಕಿದ ಹಾಗೆ.)

**ನೋಕೆ, ನೋಗೆ, ನ್ಯಾಗೆ**—ಮೇಲೆ. (ಆನೋಕೆ—ಆಮೇಲೆ.)

**ನೋನೆ**—ಪಲ್ಲಕ್ಕಿ. (ಮಾನೆಗೋಗೋನ್ಗೆ ಮೇನೆ—ಮಾನೆಗೆ ಹೋಗುವವನಿಗೆ ಪಲ್ಲಕ್ಕಿ.)

**ಮೊಗಂ ಆಗಿ**—ಸ್ಪಷ್ಟವಾಗಿ ಹೇಳದೆ. [Vague.]

**ಮುಂತೆ**—ಮತ್ತೆ.

**ಯೆವಾರ**—ವ್ಯವಹಾರ. (ದರ್ಮದ್ಯವಾರ—ಧರ್ಮದ ವ್ಯವಹಾರ.)

**ಯೊಡು**—ಜ್ಞಾನ, ದೃಷ್ಟಿ. (ನಮ್ಯಾದೊಂದೇ—ನಮ್ಮ ದೃಷ್ಟಿ ಒಂದೇ.)

**ಯೆಂಡದ್ಭೇಡ**—ಹೆಂಡವನ್ನು ಬಸಿದಮೇಲೆ, ಪೀಪಾಯಿನ ತಳದಲ್ಲಿ ಸಿಕ್ಕುವ ಹೆಪ್ಪುಗಟ್ಟಿದ ಹೆಂಡದ ಗಸಿ.

**ಲಂಗು ಲಗಾಮು**—ಕಡಿವಾಣ ಮತ್ತು ವಾಘೆ. (ಲಂಗಿಲ್ಲ ಲಗಾಮಿಲ್ಲ—ಹೇಳಿ ಕೇಳುವವರಿಲ್ಲ ಎಂಬ ಭಾವ.)

**ವಟ್ಟ**—ಹೆಚ್ಚು ಬೆಲೆಯ ನಾಣ್ಯಕ್ಕೆ ಚಿಲ್ಲರೆ ಬೇಕಾದಾದ ಕೊಡಬೇಕಾದ ಹಣ. [Brokerage.]

**ವಸಿ**—ಕೊಂಚ, ಸ್ವಲ್ಪ.

**ವುಸಾರಿ**—ಹುಷಾರ್, ಜಾಗರೂಕತೆ. [Attention.]

**ಸಬೂಬು**—ಕುಂಟುನೆವ.

**ಸಬ್ಕೆ ಸಬ್**—ಎಲ್ಲವನ್ನೂ.

**ಸಲೀಸಾಗಿ**—ತಡೆಯಿಲ್ಲದೆ ನಿರರ್ಗಳವಾಗಿ. (ಮಾತ್ಸಲೀಸಾಗ್ಕೊಟ್ರೆ—ಮಾತುಗಳನ್ನು ತಡೆಯಿಲ್ಲದೆ ಒಂದೇಸಮನಾಗಿ ಕೊಟ್ಟರೆ.)

**ಸವಾಲು**—ಉತ್ತರ ಕೊಡಲೇಬೇಕೆಂಬ ನಿರೀಕ್ಷೆಯಿಂದ ಹಾಕುವ ಪ್ರಶ್ನೆ. [A Challenge.]

**ಸಾಚೆ**—ಸತ್ಯವಂತ.

**ಸಾಮೀಲು**—ಮಾತನಾಡಿಕೊಂಡು ಒಂದಾಗಿರುವುದು. [ಸಾಮೀಲಾಗು—Be in league with.[

**ಸಾಲೆ**—ಸೀರೆ.

**ಸುಂಕೆ**—ಸುಮ್ಮನೆ.

# ಹೆಂಡದ ಹೆಣ

**ಪಾತ್ರಗಳು :**

ಕುಡಿಕ

ಕೃತಯುಗದ ಪುರುಷ

ತ್ರೇತಾಯುಗದ ಪುರುಷ

ದ್ವಾಪರಯುಗದ ಪುರುಷ

ಕಲಿಯುಗದ ಪುರುಷ

## ಆಡುವವರಿಗೆ ಸೂಚನೆ

ಇದರೊಳಗಿನ ಕುಡಿಕ ಮಧ್ಯಮವರ್ಗದವ, ಮಧ್ಯವಯಸ್ಸಿನವ. ಇವನ ವೇಷ – ಧೋತ್ರ, ಷರಟು, ಟವಲು. ಇವನ ಬಾಯಲ್ಲಿ ಎರಡು ತೆರದ ಭಾಷೆ ಬರುತ್ತದೆ–ಕುಡಿದ ಅಮಲಿನಲ್ಲಿ ಸ್ವಲ್ಪ ಸ್ವಲ್ಪ ಗ್ರಾಮ್ಯ ; ಬುದ್ಧಿ ತಿಳಿವಾದಾಗ ಸ್ವಲ್ಪ ವ್ಯಾವಹಾರಿಕವಾದ ಕನ್ನಡ. ಈ ಪಾತ್ರ ತೊದಲಿ ಮಾತನಾಡುವುದು ಅತಿಯಾಗದಂತೆಯೂ ತೂರಾಡುವುದು ಅತಿಯಾಗದಂತೆಯೂ ಗಂಭೀರ ಕೆಟ್ಟು ಲೇವಡಿಯಾಗದಂತೆಯೂ ನೋಡಿಕೊಳ್ಳಬೇಕಾದ್ದು ಅಗತ್ಯ.

ಉಳಿದ ನಾಲ್ಕು ಯುಗಪುರುಷರಿಗೆ ವೇಷ–ನಮ್ಮ ಪೌರಾಣಿಕ ವ್ಯಕ್ತಿಗಳಿಗೆ ಅಲಂಕರಿಸುವಂತೆ ಧೋತ್ರ, ಕವಚ, ಕಿರೀಟ, ಕುಂಡಲ, ಹಾರ, ಭುಜಕೀರ್ತಿ, ನಡುಪಟ್ಟಿ ಇತ್ಯಾದಿ. ಧೋತ್ರದಲ್ಲಿ ಮಾತ್ರ–ಕೃತನಿಗೆ ಬಿಳಿಯದೂ, ತ್ರೇತನಿಗೆ ಹಳದಿಯದೂ, ದ್ವಾಪರನಿಗೆ ರಕ್ತಕೆಂಪಾದ್ದೂ, ಕಲಿಗೆ ನೀಲಿ ಅಥವಾ ಕಪ್ಪುಬಣ್ಣದ್ದೂ ಆದರೆ ಆಯಾ ಯುಗಗಳ ಗುಣಧರ್ಮವನ್ನು ಸೂಚಿಸಿದಂತಾಗುತ್ತದೆ. ಕೃತನ ಕೈಯಲ್ಲಿ ಒಂದು ದೊಡ್ಡ ಕಮಲಪುಷ್ಪ, ತ್ರೇತನ ಕೈಯಲ್ಲಿ ಒಂದು ದೊಡ್ಡ ಧನುಸ್ಸು, ದ್ವಾಪರನ ಕೈಯಲ್ಲಿ ಒಂದು ದೊಡ್ಡ ಗದೆ, ಕಲಿಯ ಕೈಯಲ್ಲಿ ಒಂದು ದೊಡ್ಡ ಹಗ್ಗದ ಸುರುಳಿ ಇರುತ್ತದೆ. ಈ ನಾಲ್ಕು ಪಾತ್ರಗಳು ಆಡುವ ಮಾತು ಮರೆತಾದರೂ ವ್ಯಾವಹಾರಿಕವಾಗದಂತೆ, ಹಳೆಯ ಕಾಲದ ಭ್ರಮೆಯನ್ನು ಕಲ್ಪಿಸಿಕೊಡುವ ಹಾಗೆ ಗ್ರಂಥಗಂಭೀರವಾಗಿರಬೇಕು. ಇವರ ನಡಿಗೆಗಳಲ್ಲಿ ಅವಸರವಿರಬಾರದು.

ರಂಗಸ್ಥಳದ ಹಿಂದುಗಡೆಯ ಗೋಡೆಯ ಮೇಲೆ ರಾಮ, ಕೃಷ್ಣರ ಪಠಗಳೂ ಗಾಂಧಿ, ನೆಹರು ಪಠಗಳೂ ಎದ್ದು ಕಾಣುವಂತಿರಬೇಕು.

ಕೋಲಾಟದ ಪದ ಹಿನ್ನೆಲೆಯಿಂದ ಸ್ಪಷ್ಟವಾಗಿ ಕೇಳಿಬರಬೇಕು.

# ಹೆಂಡದ ಹೆಣ

[ಒಂದು ರೂಮು, ಗೋಡೆಯ ಮೇಲೆ ರಾಮ, ಕೃಷ್ಣ ಮುಂತಾದ ದೇವರ ಪಠ; ಗಾಂಧಿ, ನೆಹರು, ಸುಭಾಷ್ ಮುಂತಾದ ನಾಯಕರ ಪಠ. ರೂಮಿನ ಮಧ್ಯೆ ಒಂದು ಮೇಜು, ಕುರ್ಚಿ. ಮೇಜಿನ ಮೇಲೆ ಒಂದು ಮದ್ಯದ ಸೀಸೆ, ಲೋಟ; ಕುರ್ಚಿಯ ಮೇಲೆ ಕುಡಿಕ ಸೋತು ಸೊಪ್ಪಾಗಿದ್ದಾನೆ. ದೂರದಿಂದ ಕೋಲಾಟದ ಪದ ಕೇಳಿಬರುತ್ತದೆ.]

**ದೂರದ ಪದ**— ರಾಮಾ ರಾಮಯ್ಯ ರಾಮ ರಘುರಾಮಾ ।
ರಾಮಾ ರಾಮಯ್ಯ ರಾಮ ಸೀತಾರಾಮಾ ॥ **ಪ** ॥
ಮಳೆ ಬೆಳೆ ಚೆನ್ನಾಗಿ ಕೊಡು ರಾಮಾ ।
ಮನೆ ಮಂದಿಯನ್ನ ಕಾಪಾಡು ರಾಮಾ ॥ ೧ ॥
ಮನಕೆ ನೆಮ್ಮದಿಯನ್ನ ನೀಡು ರಾಮಾ ।
ಎಲ್ಲರಿಗು ಒಳ್ಳೆಬುದ್ಧಿ ಕೊಡು ರಾಮಾ ॥ ೨ ॥

**ಕುಡಿಕ**— (ಅಣಕಿಸುತ್ತ) "ಎಲ್ಲರಿಗು ಒಳ್ಳೆ ಬುದ್ಧಿ ಕೊಡು ರಾಮ !"........ ಕೊಡಪ್ಪಾ ಕೊಡು. ನಾನು ಬೇಡ ಅನ್ನೊಲ್ಲ. ಎಲ್ಲರಿಗೂ ನಿಂಗೆ ಬೇಕಾದ ಹಾಗೆ ಒಳ್ಳೇ ಬುದ್ಧಿ ಕೊಡು. ನಂಗೆ ಮಾತ್ರ ನಂಗೆ ಬೇಕಾದ ಹಾಗೆ ಒಳ್ಳೇ ಬುಡ್ಡಿ ಕೊಡು........(ಅಪಹಾಸ್ಯವಾಗಿ ನಗುತ್ತ) ಭಿಕ್ಷೆ ಬೇಡೋದು ಬೇಡತಾ ಬೇಡಿದವರಿಗೆ ಮರ್ಯಾದೆ ಬರುವಂಥದು ಬೇಡ ಬೇಡವೆ ? ಅದಕ್ಕೂ ಬುದ್ಧಿ ಕೊಡು ಅಂತ ಬೇಡಬೇಕಾ ? ಓನಾಮ ಓರಣವಾಗಿ ಗೊತ್ತಿಲ್ಲದ ಹೈಕ್ಕಳು ! ಟಠಡಢಣ...ತಥದಧನ ! ಟ ಆದ ಮೇಲಲ್ವಾ ತ ? ಅಂಗೇನೆ ಡ ಆದ ಮ್ಯಾಕೆ ದ ! ಬುಡ್ಡಿ — ಮುಗಿಸಿದರೆ —ಬುದ್ದಿ ! (ಎಂದು ಸೀಸೆ ಖಾಲಿಮಾಡುವನು.)

**ಕಲಿಪುರುಷ**—(ತಟಕ್ಕನೆ ನುಗ್ಗಿ ಸೀಸೆಯನ್ನು ಕಿತ್ತುಕೊಳ್ಳುತ್ತ) ಇದು—ಇದು—ಅತಿಯಾಗಿಹೋಯಿತು ! ಯಾವುದೂ ಮಿತಿಯಲ್ಲಿದ್ದರೆ ಚೆನ್ನ !

**ಕುಡಿಕ**—(ಎದ್ದು ತತ್ತರಿಸುತ್ತ) ಯಾವನೋ ನೀನು! ನನ್ನ ಬುಡ್ಡಿ ಕೊಡೋ!

**ಕಲಿ**—(ಕ್ರೋಧದಿಂದ ಸೀಸೆ ಮೇಲೆತ್ತಿ) ಎಲವೋ ಮಾನವ ಕೀಟ !

**ಕುಡಿಕ**—ಲೇ ! ಸೀಸೆ ಇಳೀಸೊ ! ಸುರಿದುಹೋಯ್ತದೆ ! (ಅವನ ಕೈ ಹಿಡಿದು ಸೀಸೆ ಇಳಿಸಿ) ಕೇಳೊಲೊ ! ನನ್ನ ಹೆಸರು ಕೀಟ ಅಲ್ಲ ಕಣೊ ! ಕಿಟ್ಟ ! (ಮುಖದ ಹತ್ತಿರ ಮುಖ ತಂದು) ನೀ ಯಾರೊ? ನಿನ್ನ ಎಲ್ಲೊ ಕಂಡಂಗದೆ! (ಕಲಿ ಮೂಗು ಮುಚ್ಚಿಕೊಳ್ಳುವನು) ಯಾಕೊ ? ವಾಸಣೇನ? ಮತ್ಯಾಕೊ ಬುಡ್ಡಿ ಕಿತ್ಕಂಡೆ ? (ಕಲಿಯ ಎದೆತಿವಿಯುತ್ತ) ಗೊತ್ತಮ್ಮ ! ಮುಸುಕಾ ಕ್ಕೊಂಡು ಕುಡಿಯೋವನು ನೀನು ! (ತನ್ನ ಟವಲು ಕೊಟ್ಟು) ಇರಾ, ಈ ಟುವಾಲು ಮರೆಮಾಡಿಕೊಂಡು ಕುಡಿ !

**ಕಲಿ**—ಏ ನರಕ್ರಿಮಿಯೆ ! ಹಿರಿಯರನ್ನ ಕಂಡರೆ ಸ್ವಲ್ಪವೂ ಗೌರವವಿಲ್ಲವೋ ನಿನಗೆ ?

**ಕುಡಿಕ**—ಎಲಾ ನಿನ್ನ ! ಗೌರವ್ವನ್ನೂ ಕಂಡುಕೊಂಬುಟ್ಟಿದ್ದೀಯಾ ! ಗೌರವ್ವ ಇಲ್ಲೆಲ್ಲಿ ಬತ್ತಾಳೊ ? ನೀನೇ ವೋಗಬೇಕು ಅಲ್ಲಿಗೆ !

**ಕಲಿ**—(ಅವನನ್ನು ಹಿಡಿದು ಒದರಿ) ಏ ಅಸಂಬದ್ಧಪ್ರಲಾಪಿ, ನಾನು ಯಾರು ಗೊತ್ತೊ ?

**ಕುಡಿಕ**—(ಹತ್ತಿರ ಬಂದು ಮುಟ್ಟಿ) ನೀನು—ನೀನು—ಯೇಳಿದರೆ ಏನು ಕೊಡ್ತೀ ?

**ಕಲಿ**—ಹುಂ ! ನಾನು ಕಲಿಪುರುಷ !

**ಕುಡಿಕ**—(ಅವನನ್ನು ಆಚೆ ತಳ್ಳುತ್ತ) ವೋಗೋಲೋ ! ನಂಗೇ ಕಲೀಸಾಕ್ ಬರಬೇಡ. ಪುಟ್ಟೀರನ ಕಂಪ್ನಿ ದಿರಸು ಆಕ್ಕೊಂಬುಟ್ಟು ಬಂದಾ—ನಂಗೆ

—ಕಲಿ ಅಂತ! (ಹಲ್ಕಿರಿಯುತ್ತ) ಕಲೀತಿದೀನಿ ಕಣೊ—ಕುಡಿಯೋದನ್ನ (ಅಂತ ಸೀಸೆ ಕಿತ್ತುಕೊಳ್ಳುವನು.)

**ಕಲಿ**—ಛಿ! ಅಸಹ್ಯದ ಅಪಸ್ಮಾರವೆ! ತೊಲಗಾಚೆ ದೂರ! (ತಳ್ಳುವನು.)
[ಕುಡಿಕ ತೂರಾಡಿಕೊಂಡು ಬಂದು ಮೂಲೆಗೆ ಬೀಳುವನು.]

**ಕಲಿ**—ದೇವರೇ! ದೇವರೇ! ಏನು ಗತಿ ಬಂತು ನನಗೆ! ನನ್ನ ಅಣ್ಣಂದಿರೆಲ್ಲ ಅರ್ಹರಾಗಿ ತಲೆ ಎತ್ತಿಕೊಂಡು ಓಡಾಡುತ್ತಿರುವಾಗ, ನನಗೆ ಮಾತ್ರ ಈ ಅಪಖ್ಯಾತಿ ಅಂಟಬರಬೇಕೆ? ನನ್ನ ಕಾಲದ ಇಂಥ ಕ್ರಿಮಿಗಳನ್ನು ಕಂಡವರೆಲ್ಲ "ಕಲಿಗಾಲ! ಕಲಿಗಾಲ!" ಎನ್ನಬೇಕೆ? "ಕಾಲ ಕೆಟ್ಟು ಹೋಯಿತು! ಕಾಲ ಕೆಟ್ಟುಹೋಯಿತು!" ಎನ್ನಬೇಕೆ? "ಓ ನಮ್ಮ ಕಾಲ ಹೇಗಿತ್ತು!" ಎಂದು ಇತರರು ಚಪ್ಪರಿಸಿದರೆ, ನಾನು ಮುಖ ಮುಚ್ಚಿಕೊಳ್ಳುವಂತಾಯಿತೆ! (ಎಂದು ವಿಷಾದಪಡುತ್ತ ಬಂದು, ಕುಡಿಕನನ್ನು ಕಾಲಿಂದ ತಿವಿದು, ಅವನು ಅಡದಿರಲು, ಆತಂಕದಿಂದ) ಏನಾದ? ಸತ್ತು ಹೋದನೊ? ನನ್ನ ಕಾಲದಲ್ಲಿ ಜನ ಕುಡಿತದಿಂದ ಸತ್ತರು ಎಂದರೆ ನನಗೆ ಎಂಥ ಕೆಟ್ಟ ಹೆಸರು! (ಕುಡಿಕನ ಶ್ವಾಸ, ನಾಡಿಗಳನ್ನು ನೋಡಿ) ಇಲ್ಲ, ಉಸಿರಾಡುತ್ತಿದೆ! ರಕ್ತಸಂಚಾರವಿದೆ! ಸದ್ಯ ಬದುಕಿದೆ. (ತನಗೆ ತಾನೆ) ಇವನು ಹೀಗೆ ಬಿದ್ದಿರುವವರೆಗೂ ನಾನು ಬದುಕುವುದು ಎಲ್ಲಿಂದ ಬಂತು? ಇವನಿಗೂ ನನಗೂ ಏನು ವ್ಯತ್ಯಾಸ? ಚೈತನ್ಯವಿಲ್ಲದೆ ಬಿದ್ದಿರುವ ಇದೂ ಒಂದು ಹೆಣ, ಚೈತನ್ಯಪರಿಪೂರ್ಣನಾಗಿ ವಿಚಾರ ಮಾಡುತ್ತಿರುವ ನಾನೂ ಒಂದು ಹೆಣ. ಇದು (ಕುಡಿಕನನ್ನು ಕಾಲಿಂದ ಉರುಳಿಸಿ) ಹೆಂಡದ ಹೆಣ! ನಾನು....

**ದ್ವಾಪರ**—(ಪ್ರವೇಶಿಸುತ್ತ) ನೀನು—

**ತ್ರೇತಾ**—(ಪ್ರವೇಶಿಸುತ್ತ) ಕಾಲಪುರುಷನಿಗೆ—

**ಕೃತ**—(ಪ್ರವೇಶಿಸುತ್ತ) ಪ್ರಿಯನಾದ ಕಿರಿಯ ಮಗ!

**ಮೂವರೂ**—ತಮ್ಮ, ಕಲಿಪುರುಷ, ವಿಜಯೀ ಭವ!

**ಕಲಿ**—ಅಣ್ಣಂದಿರಾ, ತಮಗೆ ತಮ್ಮನಾದ ನಾನು ನಮಸ್ಕರಿಸುತ್ತೇನೆ.

ಕೃತ—ನಿನ್ನ ವಿಷಾದ ವಿನಾಶ ಹೊಂದಲಿ, ಕಂದ.

ತ್ರೇತಾ—ನಿನ್ನ ಅಭೀಷ್ಟಗಳು ನೆರವೇರಲಿ, ಮಗು.

ದ್ವಾಪರ—ಅಧೈರ್ಯಗೊಳ್ಳಬೇಡ, ತಮ್ಮ.

ಕಲಿ—ಅಣ್ಣಂದಿರಾ, ನನ್ನ ವಿಷಾದ ಹೇಗೆ ನಾಶವಾದೀತು ? ನನ್ನ ಅಭೀಷ್ಟ ಹೇಗೆ ನೆರವೇರೀತು ? ನಾನು ಹೇಗೆ ತಾನೆ ಅಧೈರ್ಯ ಪಡದಿರಲಿ ? (ಎಂದು ಅವರನ್ನು ಕುಡಿಕನ ಬಳಿಗೆ ಕರೆದೊಯ್ದು) ಇಲ್ಲಿ ನೋಡಿ !

ಮೂವರೂ—(ನೋಡಿ) ಇದೇನಿದು ! ಮನುಷ್ಯನ ಮುಖವಿದೆ ! ಆದರೆ ಮುದ್ದೆಯ ಆಕಾರ !

ಕಲಿ—ಸ್ವಲ್ಪ ಮುಖದ ಹತ್ತಿರ ಮುಖವಿಟ್ಟು ನೋಡಿ.

ಮೂವರೂ—(ಬಗ್ಗಿ, ಅಸಹ್ಯದಿಂದ ದೂರ ಜಿಗಿದು) ಏನಿದು ಈ ದುರ್ನಾತ ?

ಕಲಿ—ಸ್ವಲ್ಪ ಕದಲಿಸಿ ನೋಡಿ.

ಮೂವರೂ—(ಕುಡಿಕನನ್ನು ಕದಲಿಸಿ) ಏನಿದು ? ಮಣ್ಣಿನಿಂದಾದುದೋ ? ಮರದಿಂದಾದುದೋ ? ಜೀವಸಹಿತವಾದುದೋ ? ಜೀವರಹಿತವಾದದ್ದೊ ?

ಕಲಿ—ಅಣ್ಣಂದಿರ, ಮೇಲುನೋಟಕ್ಕೆ ಇದು ಜೀವಸಹಿತ. ಉಳಿದೆಲ್ಲ ದೃಷ್ಟಿಯಿಂದ ಇದು ಜೀವರಹಿತ.

ಕೃತ—ಎಂದರೇನಿದು—ಜೀವಚ್ಛವವೆ ?

ಕಲಿ—ಅಲ್ಲ ಅಣ್ಣ, ಇದು—ಹೆಂಡದ ಹೆಣ.

ಮೂವರೂ—ಹಾಗೆಂದರೆ ?

ಕಲಿ—ಹಾಗೆಂದರೆ—ದೇಹದ ಒಳಗೆ ಪ್ರಾಣವನ್ನು ತುಂಬಿದರೆ ಹೇಗೆ ಆ ದೇಹ ಜೀವಂತವಾಗುತ್ತದೆಯೋ ಹಾಗೆಯೇ ಅದೇ ದೇಹದ ಒಳಗೆ ಹೆಂಡವನ್ನು ತುಂಬಿಸಿದರೆ ಆ ದೇಹ ಹೆಣವಾಗುತ್ತದೆ. ಒಳಗೆ ಸೇರಿದ ಹೆಂಡ ಪ್ರಾಣದ ಮೇಲೆ ಪ್ರಭುತ್ವ ಮಾಡುತ್ತದೆ. ಪ್ರಾಣ ಅದರ ಕಾಲಿನ ಅಡಿಯಲ್ಲಿ ಸಿಕ್ಕಿ ನಿಪ್ರಾಣವಾಗಿರುತ್ತದೆ.

ಮೂವರೂ—ತಮ್ಮ, ಪ್ರಾಣಕ್ಕೆ ಈ ಪರಿಸ್ಥಿತಿಯನ್ನು ಉಂಟುಮಾಡ ಬಾರದು. ಅದು ಪ್ರಾಣವನ್ನು ಕೊಟ್ಟ ದೇವರಿಗೆ ಅಪಚಾರ !

ಕೃತ—ಇದು ನನಗೆ ಗೊತ್ತಿಲ್ಲವೆಂದಲ್ಲ. ಆದ್ದರಿಂದಲೇ ನಾನು ಅಷ್ಟು ಪೇಚಾಡು ತ್ತಿದ್ದದ್ದು. ನನ್ನ ಕೈಯಲ್ಲಿ ಕೊಟ್ಟು ಹೋಗಿರುವ ಈ ಪ್ರಾಣ (ಕುಡಿಕನ ಕಡೆ ತೋರಿ) ಇದರಂತೆ ಇನ್ನೂ ಅನೇಕ ಪ್ರಾಣಗಳು—ಇವುಗಳನ್ನು ಉದ್ಧಾರ ಮಾಡುವುದು ಹೇಗೆ ? ಅಣ್ಣಂದಿರ, ನನಗೆ ದಿಗ್ಭ್ರಮೆಯಾಗಿದೆ.

ಕೃತ—ನೀನು ಇನ್ನೂ ಚಿಕ್ಕವನು, ತಮ್ಮ. ಪ್ರಾಣ ತನ್ನ ಸ್ವಾತಂತ್ರ್ಯವನ್ನು ತಾನೇ ಪರರಿಗೆ ಒಪ್ಪಿಸಿಕೊಟ್ಟು, ತಾನು ನಿಷ್ಪ್ರಾಣವಾದ ಕತೆ ಈ ಹೊತ್ತಿನ ದಲ್ಲ. ಜಗತ್ತು ಸೃಷ್ಟಿಯಾದ ದಿವಸದಿಂದಲೂ ಇದು ನಡೆಯುತ್ತಲೇ ಇದೆ.

ಕಲಿ—ಅದನ್ನೂ ನಾನು ಕೇಳಿದ್ದೇನೆ, ಅಣ್ಣ. ಆದರೆ ಪ್ರಾಣದ ಪಾಲಿಗೆ ಈ ಕುಡಿತದಂತಹ ಕ್ರೂರಶತ್ರು ಹಿಂದೆಂದೂ ಹುಟ್ಟಿಕೊಂಡಿರಲಿಲ್ಲ. ನಿಮ್ಮ ಕಾಲದ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಲ್ಲವೂ ಮನಸ್ಸು ಮಾಡಿದರೆ ಮಾಯವಾಗಿಹೋಗುತ್ತಿದ್ದುವು. ಆದರೆ ಈ ಕುಡಿತ ಇದೆಯಲ್ಲಾ—ಮನಸ್ಸನ್ನು ಮೆಟ್ಟಿ, ಮನಸ್ಸನ್ನು ತುಳಿದು, ಕಾಳಿಂಗನ ಮೇಲೆ ಕೃಷ್ಣ ನಾಟ್ಯವಾಡಿದ ಹಾಗೆ ತಾನು ಮನಸ್ಸನ್ನು ಆಡಿಸುತ್ತದೆ.

ದ್ವಾಪರ—ಕೃಷ್ಣನೆಂದು ಹೇಳಿದೆಯಲ್ಲ—ಆಗಿನ ಕಾಲದಲ್ಲೂ ಹೀಗೆಯೆ ಮೈಮೇಲೆ ಎಚ್ಚರವಿಲ್ಲದೆ ಬದುಕಿದವರು ಇದ್ದುದರಿಂದಲೇ ಭಗವಂತನು ಕೃಷ್ಣಾವತಾರ ಮಾಡಬೇಕಾಯಿತು.

ತ್ರೇತಾ—ಅದರಿಂದಲೇ ನನ್ನ ಕಾಲದಲ್ಲಿ ರಾಮಾವತಾರ ಮಾಡಿ ಬಂದ ಭಗವಂತ.

ಕೃತ—ನನ್ನ ಕಾಲದಲ್ಲಿ ಅಂತೂ ಏಳು ಸಲ ಅವತಾರ ಮಾಡಿ ಬಂದ.

ದ್ವಾಪರ, ತ್ರೇತಾ—ಏಳು ಸಲ ! ಏಳು ಸಲ ! ಏಳು ! ಏಳು !

ಕುಡಿಕ—(ಎದ್ದು ಆಕಳಿಸಿ, ಮೈಮುರಿದು) ಏಳುತೇನೊ ! ಕೂಕ್ಕೋಬೇಡ ! ಆಗಲೇ ಬೆಳಗಾಗಿಹೋಯ್ತೂ ? (ಸುತ್ತ ನೋಡಿ) ಎಲ್ಲಪ್ಪ ಸೂರ್ಯ ?

(ಹುಡುಕಿ) ಆಗಲೇ ನೆತ್ತಿವ್ಯಾಲೆ ಬಂದವನೆ! (ಕುರಿತು ನೋಡಿ) ಅಯ್! ಇದು ದೀಪ! ಪಣಕ್ ಅಂತ ಹತ್‌ತದೆ! ಪಣಕ್ ಅಂತ ಆರತದೆ! ಉಶ್! ಆರೋಗು!....ಆರೋಕಿಲ್ವ? ತಡಿ, ಸ್ವುಚ್ ಆಕತೇನೆ! (ಅಂತ ತಡವರಿಸುತ್ತ) ಎಲ್ಲಯ್ತೆ ಗೋಡೆ? (ಕಲಿಯ ಎದೆಯ ಮೇಲೆ ಕೈಯಾಡಿಸಿ) ಏನಿದು, ಡವಡವ ಅಂತದೆ? (ಕಣ್ಣುಬಿಟ್ಟು) ಏಯ್! ಯಾರೋ ನೀನು? (ನೋಡಿ) ಓ ನೀನಾ? ಇನ್ನೂ ಇಲ್ಲೇ ಇದೀಯಾ? (ತಟಕ್ಕನೆ ಶಂಕೆಯಿಂದ) ಎಲ್ಲೋ ನನ್ನ ಬುದ್ದಿ? (ಹುಡುಕುತ್ತ ಕ್ರಮವಾಗಿ ದ್ವಾಪರ, ತ್ರೇತಾ, ಕೃತರುಗಳನ್ನು ಸಂಧಿಸಿ) ಹಾಂ! ಒಂದು, ಎರಡು, ಮೂರು, ನಾಲ್ಕು! (ಎಂದು ಎಣಿಸುತ್ತ ಹಾಗೆಯೇ ಮೈಮರೆತು ಬೀಳುವನು.)

**ಕಲಿ**—ನೋಡಿದಿರಾ ಅಣ್ಣಂದಿರು? ಹೇಗಿದೆ ಕುಡಿತದ ಪ್ರಭಾವ?

**ದ್ವಾಪರ**—ಹಿಂದೆ ಒಂದು ಸಲ ಇಂಥದನ್ನು ಕಂಡ ನೆನಪು ಈಗ ನನಗಾಗುತ್ತದೆ. ಕಲಿ ಆಗತಾನೆ ಇನ್ನೂ ಹುಟ್ಟುವ ಹೊತ್ತು.

**ಕಲಿ**—ಏನಾಯಿತಣ್ಣ ಆಗ?

**ದ್ವಾಪರ**—ಪಾಂಡವರು ಪಗಡೆಯಾಡಿ ಕೆಟ್ಟರು ಎಂದು ಕೇಳಿಲ್ಲವೆ?

**ಕಲಿ**—ಆ ಪಗಡೆಗೂ ಈ ಕುಡಿತಕ್ಕೂ ಏನು ಸಂಬಂಧ, ಅಣ್ಣ?

**ದ್ವಾಪರ**—ಆ ಪಗಡೆಗೂ ಈ ಕುಡಿತಕ್ಕೂ ಸಂಬಂಧವಿಲ್ಲದಿದ್ದರೂ, ಪಗಡೆಗೂ ಕುಡಿತಕ್ಕೂ ಸಂಬಂಧವುಂಟು.

**ತ್ರೇತಾ**—ಅಷ್ಟೇ ಅಲ್ಲ, ಕಾಮಕ್ಕೂ ಕುಡಿತಕ್ಕೂ ಸಂಬಂಧವುಂಟು.

**ಕೃತ**—ಅಷ್ಟೇ ಅಲ್ಲ, ಕಳ್ಳತನಕ್ಕೂ ಕುಡಿತಕ್ಕೂ ಸಂಬಂಧವುಂಟು; ಅನ್ಯಾಯಕ್ಕೂ, ಅಸೂಯೆಗೂ, ನಾಸ್ತಿಕತೆಗೂ, ದರ್ಪಕ್ಕೂ, ಕ್ರೋಧಕ್ಕೂ, ಮೋಹಕ್ಕೂ ಕುಡಿತದೊಡನೆ ಸಂಬಂಧವುಂಟು.

**ಕಲಿ**—ಆದರೆ, ಅಣ್ಣ ದ್ವಾಪರ, ನೀನು ಹೇಳಿದ ಕತೆ ಯಾವುದು? ನಿನ್ನ ಕಾಲದಲ್ಲಿ ಕುಡಿತಕ್ಕೆ ಸಂಬಂಧಪಟ್ಟದ್ದು?

**ದ್ವಾಪರ**—ಪಗಡೆಯಿಂದ ಪಾಂಡವರು ಕೆಟ್ಟರು. ಪಗಡೆಯಿಂದ ಕೌರವರೂ ಕೆಟ್ಟರು. ಕೆಟ್ಟುಹೋದ ಪಾಂಡವರನ್ನು ಶ್ರೀಕೃಷ್ಣ ಪರಮಾತ್ಮನು

ಉದ್ಧಾರ ಮಾಡಿದನು. ಆದರೆ, ಅದೇ ಕೃಷ್ಣಪರಮಾತ್ಮನ ವಂಶದವರಾದ ಯಾದವರು ಕುಡಿತದಿಂದ ಬುದ್ಧಿಯನ್ನು ಕೆಡಿಸಿಕೊಂಡು, ತಮ್ಮತಮ್ಮಲ್ಲೆ ಕಾದಾಡಿ, ಒಬ್ಬರನ್ನು ಒಬ್ಬರು ಕೊಂದಾಡಿ, ಅವರ ವಂಶಕ್ಕೆ ವಂಶವೇ ನಿರ್ನಾಮವಾಯಿತು. ಶ್ರೀಕೃಷ್ಣನು ಕೂಡ ಅವರನ್ನು ಕಾಪಾಡಲು ಸಾಧ್ಯವಾಗಲಿಲ್ಲ. ಕುಡಿತ ಅಷ್ಟು ಕೆಟ್ಟದ್ದು.

**ತ್ರೇತಾ**—ನನ್ನ ಕಾಲದಲ್ಲಿ ಕುಡಿತ ಇರಲಿಲ್ಲವೆಂದಲ್ಲ. ಆದರೆ ಅದು ಮಾನವರ ಮರ್ಯಾದೆಯಿಂದ ಆಚೆಗೆ ಇತ್ತು. ಕಿಷ್ಕಿಂಧೆಯಲ್ಲಿ ಕುಡಿತವಿತ್ತು, ರಾವಣನ ರಾಜಧಾನಿಯಲ್ಲಿ ಸುರಾಪಾನವಿತ್ತು. ಅಯೋಧ್ಯೆಯಲ್ಲಿ ಮಧುಪಾನವೆಂಬುದು ಮಧುಮಾಸದ ಮಿತಿಯಲ್ಲಿ ಮುಗಿದಿತ್ತು. ಆದರೂ ಆ ಕಾಲದ ದುರ್ನಡತೆಗಳಿಗೆ ಕುಡಿತವೇ ಕಾರಣವಾಗಿರಲಿಲ್ಲ. ಆಗ ಕುಡಿತವೂ ಒಂದು ದುರ್ನಡತೆಯಾಗಿತ್ತು, ಅಷ್ಟೆ.

**ಕೃತ**—ಕಲಿ, ಈ ಇಬ್ಬರೂ ತಮ್ಮ ಕಾಲದಲ್ಲಿ ಕುಡಿತವಿದ್ದುದನ್ನು ಕಂಡವರು. ಕುಡಿತ ಹುಟ್ಟಿಬಂದುದನ್ನು ಕಂಡವನು ನಾನು. ಅಮೃತಮಥನದ ಮಹಾ ಉದ್ಯೋಗದಿಂದ ಅಮೃತ ದೊರಕಿ ದೇವತೆಗಳಿಗೆ ಹಿತವಾದ ಹಾಗೆಯೇ, ಅದೇ ಮಥನದಿಂದ ಸುರೆಯೂ ಹುಟ್ಟಿಬಂದು ರಾಕ್ಷಸರಿಗೆ ಅಹಿತವಾಯಿತು.

**ಕಲಿ**—ದೇವತೆಗಳಿಗೆ ಮಾತ್ರ ಅಮೃತ ದೊರಕಿ, ರಾಕ್ಷಸರಿಗೆ ಕೇವಲ ಸುರೆಯೇ ದೊರಕಿದ್ದು ಅನ್ಯಾಯ.

**ಕೃತ**—ಅವಸರದಲ್ಲಿ ಹಾಗೆ ಅನ್ಯಾಯವೆಂದು ಹೇಳಬೇಡ. ದೇವತೆಗಳು ದುರ್ಬುದ್ಧಿಯಿಂದ ಸುರೆ ಕುಡಿಯಬಹುದು ; ಸುರೆಯ ಪರಿಣಾಮಗಳಿಗೆ ಈಡಾಗಬಹುದು. ಅದರಂತೆಯೇ ರಾಕ್ಷಸರು ಕೂಡ ಸುಬುದ್ಧಿಯಿಂದ ಸುರೆಯನ್ನು ತ್ಯಾಗಮಾಡಿ, ಅದರ ಪರಿಣಾಮಗಳನ್ನು ಅನುಭವಿಸಬಹುದು ; ಅದೃಷ್ಟವಿದ್ದರೆ ಅಮೃತವನ್ನೂ ಪಾನಮಾಡಬಹುದು.

**ಕಲಿ**—ಹೌದು, ಎಲ್ಲಿಯೋ ಕೇಳಿದ ಹಾಗೆ ನೆನಪು. ಅಮೃತವನ್ನು ಬಯಸಿದ ರಾಹು ಕೇತುಗಳನ್ನು ಚಕ್ರದಿಂದ ಸಂಹರಿಸಿದನಂತೆ ವಿಷ್ಣು.

**ಕೃತ**—ಈಗ ನೀನೂ ನಿನ್ನ ಆ ಕುಡಿಕನ ಹಾಗೇ ಮಾತನಾಡುತ್ತಿದ್ದೀಯೆ. ಆ ರಾಕ್ಷಸರು ಅಮೃತದ ಆಸೆಗೆ ಬಂದರೆ ಹೊರತು. ಸುರೆಯನ್ನು ಮರೆತು ಬಂದವರಲ್ಲ. ಅದರಿಂದ ಆ ಗತಿಯಾಯಿತು ಅವರಿಗೆ. ಆದರೂ, ಆಸೆ ಒಳ್ಳೆಯದೆ ಆದ್ದರಿಂದ ವಿಷ್ಣುಚಕ್ರದಿಂದ ಅವರು ಮೃತಿಹೊಂದಿದರು.

**ಕಲಿ**—ತಪ್ಪಾಯಿತು, ಅಣ್ಣ. ತಿಳಿವಳಿಕೆ ಸಾಲದೆ ಆಡಿದೆ. ಆದರೆ ಆ ಮಾತು ಹಾಗಿರಲಿ. ಎಂದೋ ಹೋದ ರಾಕ್ಷಸರ ಕತೆ ಬೇಡ. ಅಂದು ಇರುವ ರಾಕ್ಷಸರಿಗೆ–ಇದೋ ಇಲ್ಲಿ ಇರುವ ಈ ರಾಕ್ಷಸನಿಗೆ–ಏನು ಮಾಡೋಣ ?

**ಮೂವರೂ**—(ಗಹಗಹಿಸಿ) ಹೆಣವನ್ನು ಬದುಕಿಸುವುದು ಆ ಪರಮಾತ್ಮನೊಬ್ಬನಿಗೆ ಮಾತ್ರ ಸಾಧ್ಯ.

**ಕಲಿ**—ಇದು ಅಂಥ ಹೆಣವಲ್ಲವಾದ್ದರಿಂದ, ಈ ಹೆಂಡದ ಹೆಣವನ್ನು ಬದುಕಿಸುವುದು ನಿಮ್ಮಿಂದ ಸಾಧ್ಯ ಎಂದ ಹಾಗಾಯಿತು. ಅಲ್ಲವೆ ?

**ಕೃತ**—ಅಂದರೆ, ಅಣ್ಣಂದಿರಿಂದ ನೀನು ನಿನ್ನ ಕೆಲಸ ಮಾಡಿಸಿಕೊಳ್ಳಬೇಕು ಎನ್ನುತ್ತೀ ?

**ಕಲಿ**—ತಮ್ಮ ಆಶೀರ್ವಾದದಿಂದ, ತಾವು ದಾರಿ ತೋರಿಸಿದರೆ—

**ಮೂವರೂ**—ನಿನ್ನ ಕೆಲಸವೇನು, ನಮ್ಮ ಕೆಲಸವೇನು—ನಮ್ಮ ನಾಲ್ವರ ಕೆಲಸವೂ ನಮ್ಮ ತಂದೆಯಾದ ಕಾಲಪುರುಷನ ಕೆಲಸವೆ. ಕಾಲಸ್ವರೂಪಿಯಾದವನೇ ಆ ಪರಾತ್ಪರನಾದ ಭಗವಂತನು.

**ಕೃತ**—ಆದ್ದರಿಂದ ಆ ಹೆಂಡದ ಹೆಣವನ್ನು ಬದುಕಿಸುವ, ಎಚ್ಚರಿಸುವ, ಉದ್ಯೋಗಗೊಳಿಸುವ, ಉತ್ತಮಗೊಳಿಸುವ ಕಾರ್ಯವನ್ನು ಭಗವತ್‌ಸೇವೆಯೆಂದು ಕೈಕೊಂಡು ನಡಸೋಣ.

**ಮೂವರೂ**—ತಥಾಸ್ತು.

**ಕೃತ**—(ಕುಡಿಕನ ಹತ್ತಿರ ಬಂದು) ಏ ಪ್ರಾಣೀ! ಪ್ರಾಣೀ! ಏಳು !

**ಕುಡಿಕ**—(ಎದ್ದು, ಮೈಮೇಲೆ ಎಚ್ಚರವಿಲ್ಲದವನಂತೆ)ಅಯ್ಯೋ ಪ್ರಾಣೀ, ಇನ್ನೆಲ್ಲಿ ಏಳತದೆ ಅದು ?

**ಕಲಿ**—ಏಯ್ ! ಎಚ್ಚರವಾಯಿತೊ ?

**ಕುಡಿಕ**—ಇನ್ನು ಎಚ್ಚರವಾದರೆಷ್ಟು ? ಆಗದಿದ್ದರೆಷ್ಟು ? ಮದುವೆಯೆಲ್ಲ ಮುಗಿದ ಮೇಲೆ ಮತಾಪಿನೋನು ಬಂದ ಅಂತ ನಮ್ಮ ಕೈಲಾಸಂ ಹೇಳಿದ ಹಾಗೆ–ಆಗೋ ಅನಾಹುತವೆಲ್ಲ ಆಗಿಹೋದ ಮೇಲೆ ಎಚ್ಚರ ಆಗಿ ಏನು ಪ್ರಯೋಜನ ? (ಮೂಗು ಸೊರಗುತ ಕಣ್ಣೊರಸಿಕೊಳ್ಳುವನು )

**ದ್ವಾಪರ**—ಏನೋ ದುಃಖಪಡುತ್ತಿರುವ ಹಾಗಿದೆ.

**ತ್ರೇತಾ**—ಹೌದು. ಏನೋ ಮಾಡಬಾರದ್ದನ್ನ ಮಾಡಿಬಿಟ್ಟವನ ಹಾಗೆ ಶೋಕ ಪಡತಾ ಇದ್ದಾನೆ.

**ಕಲಿ**—ಹೌದು, ಕುಡಿಯಬಾರದು ಅಂತ ಈಗ ಅಮಲು ಇಳಿದ ಮೇಲೆ ಜ್ಞಾನೋದಯವಾದ ಹಾಗಿದೆ.

**ಕೃತ**—ಬರೀ ಕುಡಿದದ್ದು ಅಷ್ಟೇ ಅಲ್ಲ. ಇನ್ನೂ ಏನೋ ಅಕಾರ್ಯ ಮಾಡಿದವನ ಹಾಗೆ ವ್ಯಸನಪಡತಾ ಇದಾನೆ.

**ಕುಡಿಕ**—ಎಂಥಾ ಮುದ್ದಾದ ಪ್ರಾಣಿ ! ಪ್ರಾಣೇಶ ಅಂತ ಆಂಜನೇಯನ ಹೆಸರು ಇಟ್ಟರು ಅವನ ಅಜ್ಜ ! ಅಯ್ಯೋ ಪ್ರಾಣೀ !

**ಕೃತ**—ಏನಪ್ಪಾ ? ಏನಾಯ್ತಪ್ಪ ಪ್ರಾಣೀಗೆ ?

**ಕುಡಿಕ**—ಏನಾಯ್ತು ಅಂತ ಕೇಳಬೇಡಿ. ಏನು ಮಾಡಿದೆ ಅಂತ ಕೇಳಿ.

**ಕೃತ**—ಏನು ಮಾಡಿದೇಪ್ಪ ಪ್ರಾಣಿಗೆ ?

**ಕುಡಿಕ**—(ಕೃತನ ಕೈ ಹಿಡಿದುಕೊಂಡು ಅಳುಧ್ವನಿಯಲ್ಲಿ) ನಾನು ಕುಡಿದು ಬಂದ ಹೊತ್ನಲ್ಲಿ, ಮಗೂನ ಹತ್ತಿರ ಬಿಡಬೇಡ ಅಂತ ಹತ್ ಸಾವಿರ ಸಲ ಹೇಳಿದ್ದೆ ಹಾಳಾದವಳಿಗೆ. ನನ್ನ ಮಾತು ಕೇಳಲಿಲ್ಲ.

**ಕಲಿ**—ಅಯ್ಯೋ ಹಾಳಾದವನೆ! ಮಗುವನ್ನು ಏನು ಕೊಂದುಬಿಟ್ಟೆಯೋ ?

**ಕುಡಿಕ**—ನನ್ನ ಮಗುವನ್ನು ನಾನೇ ಕೊಲ್ಲುತ್ತೇನೆಯೆ ಅಪ್ಪ ? ಏನೋ ಕೋಪ ಬಂತು. ಕೈ ಮೇಲಕ್ಕೆ ಹೋಯಿತು. ಅದು ಕೆಳಕ್ಕೆ ಬಂದ ವೇಳೆಗೆ, ಮಗು ಅಲ್ಲಿ ಅಡಿಗೆ ಸಿಕ್ಕಿಕೊಂಡು ಅಜ್ಜಿಬಜ್ಜಿಯಾಗಿ ಹೋಯಿತು.

**ದ್ವಾಪರ**—ಈಗ ಮಗುವಿನ ಕೊಲೆಗೆ ಕಾರಣ ಯಾರು ? ಅರಿಯದ ಮಗುವನ್ನು ಹೊಡೆದ ತಂದೆಯೊ? ಅರಿಯದ ಮಗುವನ್ನು ಅರಿವು ಕಳೆದು

ಕೊಂಡ ತಂದೆಯು ಬಳಿಗೆ ಬಿಟ್ಟ ತಾಯಿಯೊ ? ಇದು ಸುಲಭವಾಗಿ ಬಿಡಿಸಲಾರದ ಧರ್ಮಸೂಕ್ಷ್ಮ.

**ಕುಡಿಕೆ**—(ಮೈಮೇಲೆ ಎಚ್ಚರಿಲ್ಲದೆ, ಎದುರಿನವನನ್ನು) ಹೌದಪ್ಪ, ಅವಳ ಮರ್ಜಿ ಬಹಳ ಸೂಕ್ಷ್ಮ.

**ತ್ರೇತಾ**—ಯಾರ ಮರ್ಜಿ ? ಏನು ನೀನು ಹೇಳುತ್ತಿರುವುದು ?

**ಕುಡಿಕೆ**—ಅದೇಪ್ಪ, ನನ್ನ ಹೆಂಡತಿಯದು. ಅವಳ ಚಿನ್ನದ ಸರ, ಚಿನ್ನದ ಬಳೆ ಕಳವಾದ ದಿವಸದಿಂದ ಅವಳು ನನ್ನ ವಿಷಯದಲ್ಲಿ ಏನೋ ಒಂದು ತರ !

**ಕಲಿ**—ನಿನ್ನ ಮನೆಯಲ್ಲಿ ಚಿನ್ನ ಕಳವಾಯಿತೆ ?

**ಕುಡಿಕೆ**—(ಅಭಿಮಾನದಿಂದ) ನನ್ನ ಮನೇಲಿ ಕಳವಾದರೆ, ನಾನು ತಲೆ ಎತ್ತಿಕೊಂಡು ತಿರುಗಿದ ಹಾಗೇ ! ಕಳ್ಳ ಬಂದರೆ ಕೈಕಾಲು ಮುರಿದು ಕುತ್ತಿಗೇಗೆ ಜೋಮಾಲೆ ಹಾಕಿಯೇನು !

**ಕಲಿ**—ಮತ್ತೆ ? ಸರ ? ಬಳೆ ?

**ಕುಡಿಕೆ**—(ಕಿವಿಯ ಹತ್ತಿರ) ಏನು ಬೆಪ್ಪನಂಗೆ ಕೇಳುತೀಯೊ ! ಇನ್ನಾ ಅರ್ಥವಾಗಲಿಲ್ವ ? ನನ್ನ ಹೆಂಡ್ತಿ....ಹೆಂಗಸಿಗೇ ಗೊತ್ತಾಗೋಯ್ತು !

**ಕೃತ**—ಅಂದರೆ-ನೀನು ?

**ಕುಡಿಕೆ**—(ಜಂಭದಿಂದ) ಮತ್ಯಾರು ? ನಾನೇ !

**ದ್ವಾಪರ**—ನಿನ್ನ ಹೆಂಡತೀದು ನೀನೇ ಯಾಕಯ್ಯಾ ಕದೀಬೇಕು ?

**ಕುಡಿಕೆ**—ಅಲ್ವೊ ಪೆದ್ದೆ ! ಕುಡಿಯೋಕೆ ಕಾಸಿಲ್ದೆ ಹೋದರೆ ಏನು ತಾನೆ ಮಾಡಬೇಕೊ ? ಕೇಳಿದಾಗ ಅವಳು ಕೊಡದೆ ಹೋದರೆ ಏನು ಮಾಡಬೇಕೊ ? ನಿಂಗೆ ಕುಡಿಯೋಕೆ ಕಾಸು ಬೇಕಾದರೆ ನೀನು ಏನು ಮಾಡುತೀಯೊ ?

**ಕೃತ**—ಅದು ಆಮೇಲೆ ಹೇಳಿಕೊಡತೇನೆ. ಅದಿರಲಿ. ನೀನು ಮಗುವನ್ನು ಹೊಡೆದಾಗ ನಿನ್ನ ಹೆಂಡತಿ ಏನು ಮಾಡುತ್ತಿದ್ದಳು ?

**ಕುಡಿಕ**—(ಜುಗುಪ್ಸೆ) ಅವರವ್ವನ ಮನೇಲಿ ಮುಸುರೆ ತಿಕ್ಕತಾ ಇದ್ದಳು !

**ಕಲಿ**—ಅವರವ್ವನ ಮನೆ ? ಅಂದರೆ ನಿನ್ನ ಬಿಟ್ಟು ಹೋಗಿದ್ದಳು, ಅನ್ನು !

**ಕುಡಿಕ**—(ಸಹಾನುಭೂತಿಯಿಂದ) ಮತ್ತೆ ಕುಡಿಯೋ ಗಂಡನ ಕಾಟ ಎಷ್ಟು ದಿನ ಅಂತ ತಡಕೊಳ್ಳುತಾಳೊ ? ಪಾಪ, ಭೋ ಒಳ್ಳೇ ಹುಡುಗಿ !

**ತ್ರೇತಾ**—ಇದನ್ನೆಲ್ಲ ನಿನ್ನ ತಾಯಿ ತಂದೆ ನೋಡಿಕೊಂಡು ಸುಮ್ಮನಿದ್ದರೆ ?

**ಕುಡಿಕ**—(ದರ್ಪದಿಂದ) ಹುಂ, ಮತ್ತೆ. ನೋಡಿಕೊಂಡು ಸುಮ್ಮನಿರದೇ ಹೋದರೆ ? ನಮ್ಮಪ್ಪಂಗೆ ಹೇಳಿದೆ—ಏ ಅಪ್ಪ, ಮುಚ್ಚಿಕೊಂಡ್ ಸುಮ್ಮನೆ ಬಿದ್ದಿರೋದಾದ್ರೆ ಬಿದ್ದಿರು. ಇಲ್ದಿದ್ರೆ ನನ್ ಮನೆಯಿಂದ ಹೊರಟ್ ಹೋಗ್ ! ಅಂತ.

**ದ್ವಾಪರ**—ಏನು ಮಾಡಿದ ನಿಮ್ಮಪ್ಪ ?

**ಕುಡಿಕ**—ಹೋದ ! ನಾನು ಹೇಳಿದೆ ಅಂದಮೇಲೆ !

**ಕಲಿ**—ಎಲ್ಲಿಗೆ ಹೋದ ?

**ಕುಡಿಕ**—ಅವನೊಬ್ಬ ಇದಾನೆ—ನನಗೆ ಅಣ್ಣ ಆಗಬೇಕಂತೆ. ಅವನ ಹತ್ರ !

**ಕೃತ**—ಅಣ್ಣ ಆಗಬೇಕಂತೆ—ಅಂದರೆ ?

**ಕುಡಿಕ**—ಮತ್ ಇನ್ನೇನು ? ‹ಲೋ ಅಣ್ಣ, ನನ್ನ ಪಾಲಿನ ಹಿಸ್ಸೆ ನನಗೆ ಕೊಡಿಸೋ’ ಅಂತ ಕೇಳಿದರೆ, ‹ನೀ ಕುಡಿಯೋದು ಬಿಟ್ಟ ದಿವಸ ನಿನ್ನ ಪಾಲು ನಿನ್ನ ಕೈಗೆ’ ಅಂತಾನೆ !

**ದ್ವಾಪರ**—ಅಂದರಿನ್ನಾ ಪಾಲಾಗಿಲ್ಲ ಅನ್ನು.

**ಕುಡಿಕ**—ಆಗದಿದ್ದರೆ ಬಿಡಬೇಕಲ್ಲ ಈ ಭೂಪ ! (ಎದೆ ತಟ್ಟಿಕೊಳ್ಳುತ್ತ) ಹಾಕ್ದೆ ಇಷ್ಟು ಹೆಂಡ ಹೊಟ್ಟೆ ಒಳಕ್ಕೆ ! ಹಾಕ್ದೆ ಇಷ್ಟು ಹಣ ಲಾಯರ್ ಜೋಬಿ ಒಳಕ್ಕೆ ! ಕೋರ್ಟಿಗೆ ಹತ್ದೆ ! ನನ್ನ ಪಾಲು ಗಿಟ್ಟಿಸ್ದೆ !

**ಕಲಿ**—ಇದನ್ನ ಏನು ಮಹಾ ಸಾಧನೆ ಅಂತ ನಾಚಿಕೆ ಇಲ್ಲದೆ ಹೇಳಿಕೊಳ್ಳುತ್ತಿ?

**ಕುಡಿಕ**—(ಸೆಡೆತು) ನಾಚಿಕೆ ಯಾಕೊ ? (ಹತ್ತಿರ ಬಂದು) ಲೇ, ನೀ ಕುಡಿದಿದ್ದಿಯೇನೋ ಯಾವತ್ತಾದರೂ ? ನಿಜ ಹೇಳೊ.

**ಕೃತ**—ಅವನ ಮಾತು ಬಿಡಯ್ಯ. ಪಾಪ ಹುಡುಗ....(ಎಂದು ಕಲಿಗೂ ಕುಡುಕನಿಗೂ ಅಡ್ಡ ಬಂದು) ಸರಿ, ಮಗೂನ ಕೊಂದೆ, ಹೆಂಡತೀನ ಕಳ ಕೊಂಡೆ, ತಂದೇನ ಓಡಿಸಿದೆ, ಅಣ್ಣನ್ನ ದೂರಮಾಡಿದೆ. ನಿನ್ನಂಥವನ್ನ ಹೆತ್ತು, ನಿನ್ನ ತಾಯಿ ಪುಣ್ಯ ಮಾಡಿದಳು.

**ಕುಡಿಕ**—(ತಟಕ್ಕನೆ ಬಿಕ್ಕಿಬಿಕ್ಕಿ ಅಳುತ್ತ) ಇಲ್ಲಾಪ್ಪ, ಇಲ್ಲ. ಪುಣ್ಯ ಮಾಡಿದ್ದರೆ, ಅವಳನ್ನ ನಾನು ತಿಂದುಕೊಳ್ಳತಾ ಇದ್ದನಾ ?

**ದ್ವಾಪರ**—ಅಂದರೆ—ತಾಯಿಯ ಸಾವಿಗೂ ನೀನೇ ಕಾರಣ ಅಲ್ಲ ತಾನೆ ?

**ಕುಡಿಕ**—(ತಲೆ ತಗ್ಗಿಸಿ) ಏನು ಹೇಳಲಪ್ಪಾ ? ನನ್ನ ಪಾಲು ನ್ನ ಕೈಗೆ ಬಂತು ಅಂತ ಹೇಳಲಿಲ್ವಾ—ಅದೆಲ್ಲಾ ಮನೆ, ಹೊಲ. ಅದರ ಮೇಲೆ ಸ್ವಲ್ಪ ಸಾಲ ತೆಗೀಬೇಕಾಯಿತು. ಬಡ್ಡಿ ಹೆಚ್ಚಿತು. ಸಾಲ ತೀರಿಸೋಕಾಗಲಿಲ್ಲ. ಸ್ವತ್ತು ಹರಾಜಾಯ್ತು. ಕೊಂಡುಕೊಂಡವರ ಮೇಲೆ ಕೋಪ ಬಂತು. ರಾತ್ರಿ ಅವರ ಮನೇಗೆ ಬೆಂಕಿ ಹಾಕಿದೆ. ಪೋಲೀಸಿನವರು ಹಿಡಿದು ಜೈಲಿಗೆ ಹಾಕಿದ್ರು—ಮೂರು ವರ್ಷ. ನಾನು ಈಚೆಗೆ ಬರೋದ್ರೊಳ ಗಾಗಿ ನಮ್ಮವ್ವ (ಕಿಲಕಿಲನೆ) ಹರೋಹರ ಅಂದಿದ್ಲು !

**ಕಲಿ**—ಇಷ್ಟು ಒಂದಾದ ಮೇಲೆ ಒಂದರಂತೆ ಶುಭಪರಂಪರೆಗಳನ್ನು ಅನುಭವಿಸಿ ದರೂ ನೀನು ಇನ್ನೂ ಬದುಕಿದ್ದೀಯಲ್ಲ, ಅದು ಆಶ್ಚರ್ಯ !

**ಕುಡಿಕ**—(ಸಮಾಧಾನದಿಂದ ಗಂಭೀರವಾಗಿ) ನಿನಗೆ ಆಶ್ಚರ್ಯ ಇರಬಹುದು. ಆದರೆ ನಮಗೆ ಏನೂ ಆಶ್ಚರ್ಯವಿಲ್ಲ. ಗುಟ್ಟು—ಇಲ್ಲಿದೆ ನೋಡು—ಇಲ್ಲಿ !

(ಎಂದು ಬಚ್ಚಿಟ್ಟುಕೊಂಡಿದ್ದ ಬುಡ್ಡಿ ತೋರಿಸುವನು.)

**ಕಲಿ**—(ನಿರಾಶೆಯಿಂದ) ಅಣ್ಣಂದಿರ, ಇವನನ್ನು ತಿದ್ದುವುದು ಹೇಗೋ ನಾನು ಬೇರೆ ಕಾಣೆ !

**ಕೃತ**—ಇಷ್ಟು ನಿರಾಶನಾಗಬೇಡ, ತಮ್ಮ. ಈಗ ಇವನಿಗೆ ಮೈಮೇಲೆ ಎಚ್ಚರ ಬಂದಿದ್ದರೂ ಬುದ್ಧಿ ಇನ್ನೂ ಎಚ್ಚರವಾಗಿಲ್ಲ. ಇವನ ಬುದ್ಧಿ ತಿಳಿಯಾಗು ವಂತೆ ನಾನು ಇವನಿಗೆ ಅನುಗ್ರಹಿಸುತ್ತೇನೆ. ಆಗ ಇವನ ಹತ್ತಿರ ಮಾತ ನಾಡಿ ಇವನನ್ನು ತಿದ್ದೋಣ.

(ಎಂದು ಕುಡಿಕನ ಹತ್ತಿರ ಬಂದು ವರವನ್ನು ಅನುಗ್ರಹಿಸುವಂತೆ ಕೈಯೆತ್ತಿ) ಬುದ್ಧಿ ತಿಳಿಯಾಗಲಿ ನಿನಗೆ! ತಿಳಿಯಾಗಲಿ ನಿನಗೆ!

**ಕುಡಿಕ**—(ಮೈ ತಲೆ ಕೊಡವಿಕೊಂಡು ಎದ್ದು) ಯಾರು ನೀವು? (ಎಂದು ಭಕ್ತಿಯಿಂದ ಕೈ ಜೋಡಿಸುವನು.)

**ಕೃತ**—ನೋಡಿದಿರಾ, ಕುಡಿತ ಹಿಡಿದ ಹೊತ್ತಿನಲ್ಲಿ ಇವನು ಹಾಳಾದವನಂತೆ ತೋರಿಬಂದರೂ, ಇವನ ಅಂತಃಸತ್ತ್ವ ಇನ್ನೂ ಆರೋಗ್ಯವಾಗಿಯೆ ಇದೆ. (ಎಂದು ಕುಡಿಕನಿಗೆ) ವತ್ಸ! ನಾವು ನಾಲ್ವರೂ ನಾಲ್ಕು ಯುಗದ ಪುರುಷರು. ನಾನು ಕೃತಯುಗದ ಪುರುಷ!

**ತ್ರೇತಾ**—ನಾನು ಶ್ರೀರಾಮನ ಕಾಲದವ—ತ್ರೇತಾಯುಗಪುರುಷ!

**ದ್ವಾಪರ**—ನಾನು ಶ್ರೀಕೃಷ್ಣನ ಕಾಲದವ—ದ್ವಾಪರಯುಗಪುರುಷ!

**ಕಲಿ**—ನಾನು ನಿನ್ನ ಕಾಲದವ—ಕಲಿಯುಗಪುರುಷ!

[ಕೃತ ತ್ರೇತಾ ದ್ವಾಪರ ಪುರುಷರು ತಮ್ಮ ಹೆಸರು ಹೇಳಿದಾಗ ಭಕ್ತಿಯಿಂದ "ನಮೋಸ್ತು! ನಮೋಸ್ತು!" ಎಂದು ಬಾಗಿ ನಮಸ್ಕರಿಸಿದ ಕುಡಿಕನು, ಕಲಿಪುರುಷನ ಹೆಸರನ್ನು ಕೇಳಿದ ಕೂಡಲೆ ತನ್ನ ಬುದ್ಧಿಯನ್ನು ಮರೆಸಿಕೊಳ್ಳಲು ಪ್ರಯತ್ನಿಸುವನು.]

**ಕಲಿ**—(ಅದನ್ನು ಗಮನಿಸಿ) ಅಂದರೆ, ನಿನಗೆ ಇನ್ನೂ ಸ್ವಲ್ಪ ಲಜ್ಜೆ, ಸಿಗ್ಗು ಇದೆ ಎಂದ ಹಾಗಾಯಿತು! (ಎಂದು ಹಂಗಿಸುವನು.)

**ಕುಡಿಕ**—(ಸಂಕೋಚಪಡುತ್ತ) ಕಲಿದೇವರು ಕ್ಷಮಿಸಬೇಕು. ತಪ್ಪಾಯಿತು.

**ಕಲಿ**—ತಪ್ಪಾಯಿತು ಎಂದರೆ ಸಾಲದು. ಪುನಃ ತಪ್ಪಾಗಬಾರದು. (ಗದರುವನು.)

**ಕುಡಿಕ**—ನಾನು ಏನು ಮಾಡಲಿ, ಕಲಿದೇವರೆ? ನಾನು ಈ ಕೆಟ್ಟ ಚಟವನ್ನು ಕಳೆದುಕೊಳ್ಳಬೇಕೆಂದು ಎಷ್ಟೆಷ್ಟೋ ಪ್ರಯತ್ನ ಮಾಡುತ್ತೇನೆ. ಕುಡಿತ ಸಿಕ್ಕದಿರುವ ಸ್ಥಳಗಳಿಗೆ ಹೋಗಿ, ಅದು ಇಲ್ಲದಿದ್ದರೆ ಏನಾಗುತ್ತದೆ ಎಂದು ಪರೀಕ್ಷಿಸಿದ್ದೇನೆ. ಆ ಪರೀಕ್ಷೆಯ ಸಂಕಟಗಳನ್ನು ಅನುಭವಿಸಿ, ವಿಜಯಶಾಲಿಯಾಗಿ ಹಿಂದಿರುಗಿದ್ದೇನೆ. ಆದರೆ, ಒಳಗಿರುವ ಜೀವ ಅದನ್ನು ಆಶಿಸುವ ಹೊತ್ತಿನಲ್ಲಿ, ಹೊರಗಿರುವ ಹೆಂಡ ಅದಕ್ಕೆ ಅನಾಯಾಸವಾಗಿ

ದೊರೆಕುವಾಗ, ಸಾಮಾನ್ಯರಾದ ನಮ್ಮಂಥವರು ಹೇಗೆ ಅದರೆದುರು ನಿಂತು ಗೆದ್ದೇವು ? ನಮಗೆ ದಾರಿ ತೋರುವವರಾರು ? ಕೈ ಹಿಡಿದು ಕಾಪಾಡುವವರಾರು ?

ನಾಲ್ವರೂ—ಚ್ ! ಚ್ ! (ಎಂದು ಲೊಚಗುಟ್ಟುತ್ತ ತಲೆಯಾಡಿಸುವರು.)

**ಕುಡಿಕ**—ನೀವು ನನ್ನ ಮಾತನ್ನು ಒಪ್ಪದಿರಬಹುದು. ನೀವು ಲೊಚಗುಟ್ಟ ಬಹುದು. ಆದರೆ ನಮ್ಮ ಸಂಕಟ ನಿಮಗೆ ಅರ್ಥವಾಗುವುದಿಲ್ಲ.

**ಕೃತ**—ಅದು ಹೇಗೆ ?

**ಕುಡಿಕ**—ನಿಮ್ಮ ಕಾಲದಲ್ಲಿ, ಲೋಕದ ಜನರಿಗೆ ಏನಾದರೂ ಕಷ್ಟ ಬಂದರೆ ಅದರ ಪರಿಹಾರಕ್ಕಾಗಿ ದೇವರೇ ಸಾಕ್ಷಾತ್ತಾಗಿ ಮನುಷ್ಯರೂಪದಲ್ಲಿ ಇಳಿದು ಬರುತ್ತಿದ್ದ. ಈಗ, ಕಲಿಕಾಲದಲ್ಲಿ—

**ಕಲಿ**—ಹೌದು, ಆಗ ದೇವರನ್ನು ಇಳಿಸಿಕೊಳ್ಳುವ ಸತ್ತ್ವ ಆಗಿನವರಲ್ಲಿತ್ತು.

**ಕುಡಿಕ**—ಹೌದು, ಅದು ಎಂಥ ಸತ್ತ್ವವೆಂಬುದು ನನಗೂ ಗೊತ್ತು.

**ಕಲಿ**—ಏನಿದು ? ನನ್ನೊಡನೆ ಮಾತು ಬೆಳಸುವಷ್ಟು ಧೈರ್ಯ ಬಂತೋ ನಿನಗೆ ?

**ಕುಡಿಕ**—ಕಲಿಪುರುಷ ! ಈಗ ನಾನು ಕುಡಿದಿಲ್ಲ. ನನ್ನ ಬುದ್ಧಿ ತಿಳಿಯಾಗಿದೆ. ಆದ್ದರಿಂದ ಆಡುವುದರ ಅರ್ಥ ತಿಳಿದೇ ಆಡುತ್ತಿದ್ದೇನೆ.

**ಕೃತ**—ಹಾಂ ! ಹಾಂ ! ಸಾಕು ವಿವಾದ. ವ್ಯರ್ಥವಾದ ಮಾತು ಸಾಕು. ಅಯ್ಯಾ ಪ್ರಾಣಿ, ದೇವರು ಯಾವ ಯಾವ ಕಾಲಕ್ಕೆ ಹೇಗೆ ಹೇಗೆ ಬಂದ, ಹೇಳು ನೋಡೋಣ.

**ಕುಡಿಕ**—ಇದೇನಿದು—ನನ್ನ ಸಂಸ್ಕೃತಿಯ ಪರೀಕ್ಷೆಯೋ ? ಆಗಲಿ ಕೇಳು—ಕೃತಯುಗದ ಮಹಾನುಭಾವ. ಲೋಕಸೃಷ್ಟಿಯ ರಹಸ್ಯಗಳನ್ನು ಒಳಗೊಂಡ ವೇದಗಳನ್ನು ರಾಕ್ಷಸರು ಅಪಹಾರ ಮಾಡಿದಾಗ ವಿಷ್ಣು ಮತ್ಸ್ಯಾವತಾರಿಯಾದ. ಈಗ ಮಡಕೆಯ ಹೆಂಡ, ಸೀಸೆಯ ಸಾರಾಯಿ ಇವು ಬಂದು ನಮ್ಮ ವಿವೇಕವನ್ನು ಅಪಹರಿಸುತ್ತಿರುವಾಗ, ಯಾವ ದೇವರು ಎಲ್ಲಿ ಅವತಾರ ಮಾಡಿಯಾನು ಎಂದು ಹಂಬಲಿಸುತ್ತಿದ್ದೇವೆ. ಹೀಗೆಯೆ ದೇವಾಸುರರು ಅಮೃತಮಥನಕ್ಕೆ ದಾರಿಕಾಣದೆ ತಡವರಿಸಿದಾಗ

ದೇವನೇ ಆನೆಯಾಗಿ ಅವರ ಕಾರ್ಯಕ್ಕೆ ತಾನು ಬೆನ್‌ಬಲವಾದ. ನಮಗೆ ಯಾರು ಹಾಗೆ ಬೆನ್‌ಬಲವಾಗುವವರು ? ಭೂಮಿ ಕುಸಿದಾಗ ವರಾಹನಾಗಿ ಭೂಮಿಯನ್ನು ಮೇಲೆತ್ತಿದ ಭಗವಂತಾ, ಭೂಮಿಯ ಮಕ್ಕಳು ನಾವು ಕುಸಿಯುವಾಗ ನಮ್ಮನ್ನು ಹಿಡಿಯದೆ, ನಾವು ಕುಸಿಯದಂತೆ ನಮ್ಮನ್ನು ರಕ್ಷಿಸದೆ, ಕುಸಿದ ಮೇಲೆ ನಮ್ಮನ್ನು ಹೀಗೆ ಹಂಗಿಸಿ ಅಣಕಿಸಿ ಗೋಳಾಡಿಸುವ ಈ ಕಲಿಪುರುಷನ ಕೋಟಲೆಯನ್ನು ಹೋಗಲಾಡಿಸುವುದಕ್ಕಾಗಿಯಾದರೂ ಮತ್ತೊಮ್ಮೆ ನೀನು ಅವತಾರ ಮಾಡಬಾರದೇ ಭಗವಂತಾ ! (ಎಂದು ಕ್ರಮೇಣ ಅವನ ಮಾತೂ ಭಾವವೂ ಉದ್ವೇಗಹೊಂದಿ, ಕಂಬನಿಗರೆಯುವನು.)

**ಕಲಿ**—(ಮೊರೆಯುತ್ತ) ಅಂತೂ, ಈ ಅನಿಷ್ಟಕ್ಕೆ ನಾನೇ ಶನೀಶ್ವರ ಹಾದೋ !

**ಕೃತ, ದ್ವಾಪರ,ತ್ರೇತಾ**— ಕೋಪಗೊಳ್ಳಬೇಡ, ಕಲಿ. ಈ ಮನುಷ್ಯಪ್ರಾಣಿ ಆಡುವ ಮಾತು ಯುಕ್ತಿಯುಕ್ತವಾಗಿದೆ.

**ಕಲಿ**—ಅಹ್ಹಾ ! ನೀವೂ ಅವನ ಪಕ್ಷ ವಹಿಸಿದಿರೋ ? ಆಗಲಿ.

**ಕೃತ**—ಇದರಲ್ಲಿ ಪಕ್ಷವೇನು ಬಂತು, ಕಲಿ ? ಕುಡಿಯುವ ಆಕರ್ಷಣೆಯನ್ನು ಒಡ್ಡಿ, ಕುಡಿದನೆಂದು ಇವನನ್ನು ದೂರಿ ದಂಡಿಸಿದರೆ ಏನು ಬಂತು ?

**ಕಲಿ**—ಅಣ್ಣಂದಿರು ನೀವೇ ಹೀಗೆ ಹೇಳಿದರೆ—ನಾನು ಏನು ಮಾಡಬೇಕು ?

**ಕುಡಿಕ**—ಕುಡಿತದ ಬಲೆಗೆ ಬಿದ್ದವನು ನಾನು ಹೇಳುತ್ತೇನೆ—ಏನು ಮಾಡಬೇಕೆಂದು. ಒಂದು–ಕುಡಿತ ನಮಗೆ ದೊರಕದಂತೆ ಮಾಡು. ಇಲ್ಲದಿದ್ದರೆ ದೇವರು ಇನ್ನೊಂದು ಸಲ ಅವತರಿಸುವಂತೆ ಮಾಡು. ನಿನ್ನ ಕೈಯೆಲ್ಲಾಗದಿದ್ದರೆ ಅವನಿಂದಲಾದರೂ ಈ ಸುರಾಪಾನದ ಸಂಹಾರವಾಗಲಿ.

**ಕೃತ**—ತಮ್ಮ, ಇವನ ಮಾತಿಗೆ ಮೆಚ್ಚಿಕೊ. ಕುಡಿಯುವವರನ್ನು ನಿವಾರಿಸುವುದಕ್ಕಿಂತ ಮೊದಲು, ಅದಕ್ಕಿಂತ ಹೆಚ್ಚಾಗಿ, ಕುಡಿಸುವವರನ್ನು ನಿವಾರಿಸು. ಅದು ನಿಜವಾದ ರಾಜನೀತಿ.

**ಕುಡಿಕ**—ಇನ್ನೂ ಹತ್ತು ಬಾರಿ ಹೇಳಿ ! ಹೇಳಿ !

**ಕೃತ**—ಮತ್ತೆ ನಿನಗೂ ಹೇಳಬೇಕಾದ್ದು ಉಂಟು. ಅವತಾರದ ಕೃತ್ಯ ಒಂದೊಂದು ಯುಗದಲ್ಲಿ ಒಂದೊಂದು ತೆರನಾಗಿ ನಡೆದದ್ದುಂಟು. ನನ್ನ ಕಾಲದಲ್ಲಿ ಏಳು ಅವತಾರಗಳಾದುವು ಎಂದರೂ, ತ್ರೇತಾಯುಗದಲ್ಲಿ ಒಂದು, ದ್ವಾಪರದಲ್ಲಿ ಒಂದು, ಕಲಿಯಲ್ಲಿ ಕಲ್ಕಿ ಎಂದರೂ ಈ ಹತ್ತಲ್ಲದೆ ಇನ್ನೂ ಎಷ್ಟೋ ಆಗಿವೆ. ಹಿಂದೆ ಎಲ್ಲಾ 'ಅವತಾರ'ವಾಗುತ್ತಿತ್ತು. ಈಗ ನನ್ನ ಪ್ರಿಯ ತಮ್ಮ ಕಲಿಯ ಕಾಲದಲ್ಲಿ ಅವತಾರದ ಬದಲು ಉತ್ತಾರಗಳಾಗುತ್ತಿವೆ. ದೇವರು ಅಲ್ಲಿಂದ ಇಲ್ಲಿಗೆ ಇಳಿದುಬರುವುದರ ಬದಲು, ಇಲ್ಲಿ ಒಳಗಿರುವ ದೇವರು ದೇಹದ ಮಿತಿಗಳನ್ನು ಮೀರಿ ಮಾನವತ್ವವನ್ನು ದೇವತ್ವಕ್ಕೆ ಏರಿಸಿ ಬರುತ್ತಾನೆ.

**ಕುಡಿಕ**—ಅದು ಹೇಗೆ, ಯುಗಪುರುಷ?

**ಕೃತ**—ಅದು ! ಹೀಗೆ (ಗೋಡೆಯ ಕಡೆ ತೋರಿಸಿ) ಆ ರಾಮ, ಕೃಷ್ಣ ಅವರು ಮನುಷ್ಯರೂಪದಲ್ಲಿ ಇಳಿದು ಬಂದ ದೇವರು. ಈ ಗಾಂಧಿ, ನೆಹರು ಇವರು ಮನುಷ್ಯರೂಪದಲ್ಲಿ ದೇವತಾ ಪ್ರಭಾವಗಳನ್ನು ಬೆಳಗಿಸುವುದು ಹೇಗೆಂದು ದಾರಿಹಾಕಿಕೊಟ್ಟವರು. ಪ್ರಾಣಿ, ನೀನು ಆ ರಾಮ ಕೃಷ್ಣರ ಸಂತಾನದವನೂ ಹೌದು, ಈ ಗಾಂಧಿ, ನೆಹರು ಇವರ ಸಂತಾನದವನೂ ಹೌದು. ನಿನ್ನ ಈ ಕುಡಿತದ ಕಲ್ಲುಸೆರೆಯಿಂದ ಪಾರಾಗಬೇಕಾದರೆ ನಿನಗೆ ದೇವನ ಅನುಗ್ರಹವೂ ಬೇಕು, ನಿನಗೆ ನಿನ್ನ ಸ್ವಂತ ನಿಗ್ರಹವೂ ಬೇಕು.

**ಕುಡಿಕ**—ದೇವನ ಅನುಗ್ರಹವನ್ನು ತಾವು ದೊರಕಿಸಿಕೊಡಿ. ಅದರಿಂದ ಕುಡಿತ ಕೈಗೆ ಎಟುಕದಂತಾಗಲಿ. ನಿಗ್ರಹಿಸಿಕೊಳ್ಳುವ ಭಾರ ನನಗಿರಲಿ.

**ಕಲಿ**—ತಥಾಸ್ತು. ಇದು ನನಗೂ ನಿನಗೂ ಆದ ಒಪ್ಪಂದ ಎಂದುಕೊ. ಇದೆ ನಿನ್ನ ಕಡೆಯ ಕುಡಿತವಾಗಲಿ. ಅದರ ಕಹಿಗಳನ್ನು ನೀನು ನಿನ್ನ ಸ್ವಂತ ಸಹನೆಯಿಂದ ಅನುಭವಿಸಿ ಕಳೆದುಕೊ.

**ಕೃತ**—(ವರವನ್ನು ನೀಡುವಂತೆ ಕೈಯೆತ್ತಿ) ನಮ್ಮ ಅನುಗ್ರಹದಿಂದ ತಿಳಿಯಾದ ನಿನ್ನ ಬುದ್ಧಿ ಎಂದಿನಂತೆ ಅಮಲಿಗೆ ತಿರುಗಿ ಸಿಕ್ಕಿ, ನಿನ್ನ ಪ್ರಯತ್ನದಿಂದ ಅದೇ ತಾನಾಗಿ ತಿಳಿಯಲಿ.

(ಕುಡಿಕ ತನ್ನ ಎಚ್ಚರವನ್ನು ಕಳೆದುಕೊಂಡು, ಮತ್ತೆ ನೈಮರೆತು ಸೊಪ್ಪಾಗಿ ಬೀಳುವನು)

**ಕಲಿ**—ಇಲ್ಲಿನ ಕೆಲಸ ಆಯ್ತು. ಬನ್ನಿ ಅಣ್ಣಂದಿರ, ಹೋಗೋಣ.

**ಮೂವರೂ**—ಎಲ್ಲಿಗೆ, ಕಲಿ ?

**ಕಲಿ**—ಇನ್ನೆಲ್ಲಿಗೆ ? ಇಲ್ಲಿ ಕುಡಿಯುವವನನ್ನು ಕಂಡು ಮಾತನಾಡಿಸಿದ ಹಾಗೆ ಅಲ್ಲಿ ಕುಡಿಸುವವರನ್ನು ಕಂಡು ಮಾತನಾಡಿಸುವುದಕ್ಕೆ !

**ಮೂವರೂ**—ಹೋಗೋಣ. ಅದೊ, ಹೊರಟ ಕಾರ್ಯ ಕೈಗೂಡುವುದೆಂಬುದಕ್ಕೆ ಶುಭಸೂಚನೆ-ಕೋಲಾಟದ ಪದ !

**ದೂರದ ಪದ**—ರಾಮಾ ರಾಮಯ್ಯ ರಾಮಾ ರಘುರಾಮಾ ।
ರಾಮಾ ರಾಮಯ್ಯ ರಾಮಾ ಸೀತಾರಾಮಾ ॥ ಪ ॥
ಮಳೆ ಬೆಳೆ ಚೆನ್ನಾಗಿ ಕೊಡು ರಾಮಾ ।
ಮನೆ ಮಂದಿಯನ್ನು ಕಾಪಾಡು ರಾಮಾ ॥ ೧ ॥
ಮನಕೆ ನೆಮ್ಮದಿಯನ್ನ ನೀಡು ರಾಮಾ ।
ಎಲ್ಲರಿಗು ಒಳ್ಳೆ ಬುದ್ಧಿ ಕೊಡು ರಾಮಾ ॥ ೨ ॥

(ನಾಲ್ವರು ಯುಗಪುರುಷರೂ ಕೊನೆಯ ಚರಣವನ್ನು ತಾವೂ ಹಾಡುತ್ತ ಇರುವಾಗ ತೆರೆ ಇಳಿಯುತ್ತದೆ.)

# ಮಕ್ಕಳು ಓದಬೇಕಾದ ಪುಸ್ತಕಗಳು

## ಜಿ. ಪಿ. ರಾಜರತ್ನಂ ಬರೆದವು

| | | | |
|---|---|---|---|
| ೧. | ನಮ್ಮ ಬಾವುಟ | .... | ೦-೫೦ |
| ೨. | ಕರ್ಮ | .... | ೦-೭೫ |
| ೩. | ಕಥೆಗೆ ಬದಲು ಕಥೆ | .... | ೦-೭೫ |
| ೪. | ಸರಬುರುಡೆ | .... | ೧-೦೦ |
| ೫. | ಕಾಶ್ಮೀರದ ಹಳ್ಳಿಯ ಕಥೆಗಳು | .... | ೧-೦೦ |
| ೬. | ತೆನಾಲಿ ರಾಮ | .... | ೧-೫೦ |
| ೭. | ಗೌತಮ ಬುದ್ಧ | .... | ೧-೫೦ |
| ೮. | ಅಲ್ಲಮ ಪ್ರಭು | .... | ೧-೭೫ |
| ೯. | ನಾಳೀಜಂಘ | .... | ೧-೭೫ |
| ೧೦. | ರಾಯನರಿ | .... | ೨-೦೦ |
| ೧೧. | ಸೈಂಧವ ಕುದುರೆ | .... | ೨-೦೦ |
| ೧೨. | ಆರು ಕೊಂಬಿನ ಆನೆ | .... | ೨-೦೦ |
| ೧೩. | ಬೆಂಕಿಯ ಬಣ್ಣದ ಸಿಂಹ | .... | ೨-೨೫ |
| ೧೪. | ಮಕ್ಕಳ ಗಾಂಧಿ | .... | ೨-೫೦ |
| ೧೫. | ಯೇಸು ಕ್ರಿಸ್ತ | .... | ೨-೫೦ |
| ೧೬. | ದೊಡ್ಡವರ ದಾರಿ | .... | ೨-೭೫ |
| ೧೭. | ಮಣಿಕಂಠ | .... | ೩-೫೦ |
| ೧೮. | ಗುಟ್ಟ | .... | ೩-೫೦ |




ಗೀತಾ ಏಜನ್ಸೀಸ್, ಬಳೇಪೇಟೆ, ಬೆಂಗಳೂರು-೨.

# ರಾಜರತ್ನಂ ಅವರ ಕೆಲವು ಪುಸ್ತಕಗಳು

| | | |
|---|---|---|
| ೧. | ರತ್ನನ ಪದಗಳು .... .... .... | ೩.೦೦ |
| ೨. | ನಾಗನ ಪದಗಳು .... .... .... | ೧.೨೫ |
| ೩. | ಪುರುಷ ಸರಸ್ವತಿ .... .... .... | ೪.೦೦ |
| ೪. | ಹನಿಗಳು .... .... .... | ೨.೦೦ |
| ೫. | ನೆನಪು ನಂಜುಂಡ .... .... .... | ೩.೫೦ |
| ೬. | ಗಂಡುಗೊಡಲಿ ಮತ್ತು ಸಂಭವಾಮಿ ಯುಗೇ ಯುಗೇ .... .... | ೧.೫೦ |
| ೭. | ನರಕದ ನ್ಯಾಯ, ಇತ್ಯಾದಿ., .... .... | ೧.೫೦ |
| ೮. | ವಿಚಾರ ತರಂಗ .... .... .... | ೪.೫೦ |
| ೯. | ಕಿರಣಾನುಭವ .... .... .... | ೬.೦೦ |
| ೧೦. | ಸ್ವಾರಸ್ಯ .... .... .... | ೧೫.೦೦ |

‘ವಿದೇಹ’

೧೪, ೧೭ನೇ ಕ್ರಾಸ್ ರೋಡ್

ಮಲ್ಲೇಶ್ವರಂ, ಬೆಂಗಳೂರು-೩.